# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 32ನೇ ಸಂಚಿಕೆ ಕೊಪ್ಪ 3-5-1987 ಭಾನುವಾರ ಬೆಲೆ 50 ಪೈಸೆ




ದಯಂಬಳ್ಳಿ-ಸುತ್ತಮುತ್ತ ಹುಡುಗಿಯರ ಸಾಗಾಟದ ಗುಲ್ಲು:

## ನಿಜ ಸಂಗತಿ ಬಯಲಾಗುವುದೆ?

ಕೊಪ್ಪ: ಈ ತಾಲ್ಲೂಕಿನ ದಯಂಬಳ್ಳಿ ಗ್ರಾಮದಿಂದ ಮೂವರು ಹರಿಜನ ಯುವತಿಯರು ಕಾಣೆಯಾಗಿದ್ದಾರೆನ್ನಲಾಗಿದ್ದು, ಅವರನ್ನು ಬೊಂಬಾಯಿಗೆ ಕರೆದೊಯ್ಯಲಾಗಿದೆಯೆಂಬ ಗುಮಾನಿಯನ್ನು ಅವರ ತಂದೆ-ತಾಯಿಗಳು ವ್ಯಕ್ತಪಡಿಸುತ್ತಿದ್ದಾರೆ.

ಅಲ್ಲಿನ ಶೇಷಯ್ಯ ಎಂಬವರ ಒಬ್ಬ ಮಗಳು ಮತ್ತು ಕೆಂಚಯ್ಯ ಎಂಬವರ ಒಬ್ಬ ಮಗಳು ಸುಮಾರು ಒಂದು ತಿಂಗಳ ಹಿಂದೆ ಕಾಣೆಯಾಗಿದ್ದು; ಅವರನ್ನು ಅದೇ ಊರಿನ ಇಬ್ಬರು ಯುವಕರಾದ ಹಂಚನೂರು ಶ್ರೀನಿವಾಸ ಮತ್ತು ಕುಂದಕೇರಿ ರಾಜಶೇಖರ ಎಂಬವರು ಬೊಂಬಾಯಿಗೆ ಕರೆದೊಯ್ದಿರುವ ಗುಮಾನಿಯ ಮೇಲೆ ಇಲ್ಲಿನ ಪೋಲೀಸ್ ಠಾಣೆಗೆ ದೂರು ನೀಡಿದ್ದರು.

ಅವರನ್ನು ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ವಿಚಾರಣೆ ಮಾಡಿದ್ದರು. ಜಿಲ್ಲಾ ಪರಿಷತ್ ಸದಸ್ಯ ಬಿ. ಜಿ. ಚಿದಂಬರ್‌ರವರ ಜೊತೆಯಲ್ಲಿ ಠಾಣೆಗೆ ಬಂದ ಅವರು ತಾವುಗಳು ಅಂಥ ಯಾವುದನ್ನೂ ಮಾಡುತ್ತಿಲ್ಲವೆಂದೂ ದುರುದ್ದೇಶದಿಂದ ದೂರು ನೀಡಲಾಗಿರುವುದಾಗಿಯೂ ಹೇಳಿದ್ದರು. ಈ ಹುಡುಗಿಯರಲ್ಲೊಬ್ಬಳ ಅಣ್ಣನೊಬ್ಬನು ತನ್ನ ತಂಗಿ ಹೀಗೇ ಆಗಾಗ ಮಂಗಳೂರಿಗೆಂದು ಹೋಗಿಬರುತ್ತಿರುವುದಾಗಿಯೂ, ಅವಳನ್ನು ಮನೆಯಲ್ಲಿ ಯಾರೂ ಕೇಳುವುದಿಲ್ಲವೆಂದೂ ಹೇಳಿಕೆ ನೀಡಿದ್ದನು. (ಈತ ಸದರಿ ಶ್ರೀನಿವಾಸನ ಮನೆಯಲ್ಲಿ ಕೆಲಸಕ್ಕಿದ್ದಾನಂತೆ.) ಬೇರೆ ಯಾವುದೇ ಸುಳಿವು-ಸಾಕ್ಷ್ಯಾಧಾರ ಇಲ್ಲದ್ದರಿಂದ ಹಾಗೂ, ಬಲಾತ್ಕಾರ ಅಥವಾ ಅಪಹರಣವಾಗಿರದೆ ಇಚ್ಛಾಪೂರ್ವಕವಾದ ನಡವಳಿಕೆಯಾಗಿದ್ದಲ್ಲಿ ಕಾನೂನು ಕ್ರಮಕ್ಕೆ ಅವಕಾಶವಿಲ್ಲದ್ದರಿಂದ ಪ್ರಕರಣವನ್ನು ಹಾಗೇ ಚುಕ್ತಾ ಮಾಡಿದುದಾಗಿ ದುರ್ಗಯ್ಯ ಹೇಳುತ್ತಾರೆ.

ಆದರೆ ಈಗ್ಗೆ ಎಂಟು ದಿನದಲ್ಲಿ ಅವಳ ಇನ್ನೊಬ್ಬಳು ತಂಗಿ ರತ್ನ ಎಂಬಾಕೆಯೂ ಕಾಣೆಯಾಗಿರುವುದಾಗಿಯೂ, ಆಕೆಯನ್ನು ಸಹ ಈ ಹಿಂದೆ ಆ ಯುವತಿಯರು ಕರೆದಿದ್ದರೆಂದೂ ಅವಳ ತಂದೆ ಹೇಳುತ್ತಾರೆ. ಆದರೆ **ಈ ಬಗ್ಗೆ ಅವರು ಪುನಃ ದೂರು ನೀಡಿಲ್ಲ.** ಮೊದಲಿನ ಇಬ್ಬರು ಯುವತಿಯರೊಂದಿಗೆ ಸದರಿ ಯುವಕರು ಅಂದು ಮುಂಡಗೋಡಿನಲ್ಲಿ ಬಸ್ ಹತ್ತಿದ್ದನ್ನೂ, ಬಿದರಗೋಡಿನಲ್ಲಿ ಅವರೊಂದಿಗೆ ಹೋಗುತ್ತಿದ್ದುದನ್ನೂ ನೋಡಿದವರಿದ್ದಾರೆಂದು ಅವರು ಹೇಳುತ್ತಾರೆ. **ಇದನ್ನೂ ಅವರು ಪೋಲೀಸರಿಗೆ ತಿಳಿಸಿಲ್ಲ.**

ಏ. 27ರಂದು ಈ ಇಬ್ಬರು ತಂದೆಗಳೂ ಪತ್ರಿಕಾ ಕಚೇರಿಗೆ ಬಂದು ಇದನ್ನೆಲ್ಲ ತಿಳಿಸಿದರು. ಆಗ ಠಾಣೆಯಲ್ಲಿ ಎಸ್ಸೈ ಇರಲಿಲ್ಲ. ಅವರು ಬಂದ ನಂತರ ಒಟ್ಟಿಗೇ ಠಾಣೆಗೆ ಹೋಗಿ ವಿಚಾರಿಸೋಣವೆಂದು ಠಾಣೆಯ ಹತ್ತಿರ ಇರಲು ಹೇಳಿ ಕಳಿಸಿದರೆ ಅನಂತರ ಅವರು ದೂರನ್ನೂ ನೀಡದೆ, ಪತ್ರಿಕೆಯ ಕಚೇರಿಗೂ ತಿಳಿಸದೆ ಹೊರಟುಹೋಗಿದ್ದಾರೆ.

ಇವರುಗಳ ಜೊತೆಗೆ ಉತ್ತಮೇಶ್ವರದ ಪುಡಾರಿಯೊಬ್ಬರು ಬಂದಿದ್ದರು. ಅವರ ದೃಷ್ಟಿಯಲ್ಲಿ "ಠಾಣೆಗೆ ಹೋಗಿ ಕೇಳುವ ಆಗತ್ಯವೇನಿಲ್ಲ" (ಬಹುಶಃ ಅವರು ಹೇಳಿದಂತೆ ನೇರವಾಗಿ ಪತ್ರಿಕೆಯಲ್ಲಿ ಪ್ರಕಟಿಸಬೇಕಿತ್ತು. ಜೊತೆಗೆ, ತಾನು ಅದನ್ನು ಖಂಡಿಸಿದ್ದೇನೆನ್ನುವ 'ಹೇಳಿಕೆ' ಪ್ರಕಟವಾಗಬೇಕಿತ್ತು!)

ಈ ಪ್ರಕರಣಗಳ ಬಗ್ಗೆ ಪತ್ರಿಕೆಗಳ ಬೆನ್ನು ಹತ್ತಿರುವ ದಯಂಬಳ್ಳಿಯ ಒಬ್ಬ 'ಗಣ್ಯ'ರಾಗಲಿ, ಈ ಪುಡಾರಿಯಾಗಲಿ, ಪೋಲೀಸರಿಗೆ ಕ್ರಮ ಬದ್ಧವಾಗಿ ದೂರು ಕೊಡಿಸಿ, ಅನಂತರ ಆ ಬಗ್ಗೆ ದೊರೆಯುವ ಸುಳಿವುಗಳನ್ನೆಲ್ಲ ಪೋಲೀಸರಿಗೆ ತಿಳಿಸುತ್ತ, ಪ್ರಕರಣದ ಬೆನ್ನು ಹತ್ತುವುದು ಸರಿಯಾದ ಮಾರ್ಗ. ಇಂಥ ಕ್ರಮಬದ್ಧವಾದ ಮಾರ್ಗೋಪಾಯಗಳಿಗೆ ಬದಲು ಪತ್ರಿಕೆಗಳನ್ನು ಒಳದಾರಿಯಾಗಿ ಬಳಸುವುದು ಆರೋಗ್ಯಕರ ಪ್ರವೃತ್ತಿಯಲ್ಲ.

ಆದ್ದರಿಂದ, ದಯಂಬಳ್ಳಿ ಅಥವಾ ಬೇರೆಲ್ಲೇ ಆಗಲಿ, **ಬಲಾತ್ಕಾರವಾಗಿ** ಯುವತಿಯರನ್ನು ಬೊಂಬಾಯಿಗೆ ಸಾಗಿಸುವುದು ನಡೆಯುತ್ತಿದೆಯಾದಲ್ಲಿ ಅದನ್ನು ತಡೆಗಟ್ಟಬೇಕೆಂಬ ವಾಸ್ತವಿಕವಾದ ಕಳಕಳಿ ಇರುವವರು ಮೇಲೆ ಹೇಳಿದಂತೆ ಕ್ರಮಬದ್ಧವಾದ ಮಾರ್ಗ ಅನುಸರಿಸಬೇಕು. **ಪತ್ರಿಕೆಗಳ ಪ್ರಯತ್ನ ಅಥವಾ ಪಾತ್ರ ಏನಿದ್ದರೂ ಪೂರಕ ಮಾತ್ರ ಎಂಬುದನ್ನು ಅರಿಯಬೇಕು.**

### ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳಿಗೆ ಮೋಸ?

(ವರದಿ : **ಕಲ್ಕುಳಿ ವಿಠಲ ಹೆಗ್ಡೆ**)

ಶೃಂಗೇರಿ: ದೇಶದಲ್ಲಿಯೇ ಪ್ರಪ್ರಥಮವಾದ ನೆಮ್ಮಾರಿನ ಹಂದಿ ಸಾಕಣೆ ಕೇಂದ್ರ (ಡ್ವಾಕ್ರಾ)ದ ವಹಿವಾಟಿನಲ್ಲಿ ಸುಮಾರು 10 ಸಾವಿರ ರೂ.ಗಳಿಗೂ ಮಿಕ್ಕಿದ ಅವ್ಯವಹಾರ ನಡೆದಿರುವ ಸುಳಿವು ಹೊರ ಬಿದ್ದಿದೆ. 9,000 ರೂ.ಗೂ ಮಿಕ್ಕಿದ ವೆಚ್ಚಗಳಿಗೆ ವೋಚರ್‌ಗಳಿಲ್ಲದಿರುವುದು, ಒಂದು ವೋಚರಿನಲ್ಲಿ 1000 ರೂ. ವ್ಯತ್ಯಾಸವಿರುವುದು ಮುಂತಾದ ವ್ಯತ್ಯಾಸಗಳು ಬೆಳಕಿಗೆ ಬಂದಿದ್ದು, ಹೆಚ್ಚಿನ ತನಿಖೆ ನಡೆಯುತ್ತಿದೆ. ಇದರ ಉಸ್ತುವಾರಿಕೆ ಶೃಂಗೇರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳದೂ, ವಹಿವಾಟು ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕಿನ ನೆಮ್ಮಾರು ಶಾಖೆಯದೂ ಆಗಿದ್ದು, ಮುಗ್ಧ ಫಲಾನುಭವಿಗಳಿಗೆ ದೊಡ್ಡ ಪ್ರಮಾಣದಲ್ಲಿ ಮೋಸವಾಗಿರುವ ಸಾಧ್ಯತೆಯಿದೆ.

ರಾಜ್ಯ ಮಟ್ಟದ ಕೆಸರುಗದ್ದೆ ಓಟ:

## ನಾಗೇಂದ್ರ, ಗೀತಾ ಪ್ರಥಮ

ಕೊಪ್ಪ: ಇಲ್ಲಿನ ಬಾಳಗಡಿಯಲ್ಲಿ ಏ. 27ರಂದು ನಡೆದ ರಾಜ್ಯ ಮಟ್ಟದ ಕೆಸರು ಗದ್ದೆ ಓಟದಲ್ಲಿ ತೀರ್ಥಹಳ್ಳಿಯ ನಾಗೇಂದ್ರ ಮತ್ತು ಚಿಕ್ಕಮಗಳೂರಿನ ಕೆ. ಕೆ. ಗೀತಾ ಪ್ರಥಮ ಸ್ಥಾನ ಪಡೆದರು.

ಚಿಕ್ಕಮಗಳೂರಿನ ಗೋಪಾಲ ಗೌಡ ಮತ್ತು ಕೆ.ಬಿ. ಶೈಲಾ ದ್ವಿತೀಯ ಸ್ಥಾನವನ್ನೂ, ಹಗ್ಗ ಎಳೆಯುವ ಸ್ಪರ್ಧೆಯಲ್ಲಿ ಬಾಳೆಹೊನ್ನೂರಿನ ಸ್ಟೀಫನ್ ತಂಡ ಪ್ರಥಮ ಹಾಗೂ ಬಾಳಗಡಿಯ ಜಾಯ್ಸ್ ತಂಡ ದ್ವಿತೀಯ ಸ್ಥಾನವನ್ನೂ ಗಳಿಸಿದರು.

### ಉತ್ಸಾಹ

ಬಾಳಗಡಿಯ ಸರ್ವೋದಯ ಯುವಕ ಸಂಘ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಆಶ್ರಯದಲ್ಲಿ ನಡೆದ ಈ ಸ್ಪರ್ಧೆಗಳು ಉತ್ಸಾಹ ಮತ್ತು ಕುತೂಹಲಕರವಾಗಿ ನಡೆದವು. ಕೆಸರುಗದ್ದೆ ಓಟದ ಸ್ಪರ್ಧೆಯಲ್ಲಿ 120 ಜನ ಹಾಗೂ ಹಗ್ಗ ಎಳೆಯುವ ಸ್ಪರ್ಧೆಯಲ್ಲಿ 8 ತಂಡಗಳವರು ಭಾಗವಹಿಸಿದ್ದರು.

### ಪಾರಿತೋಷಕ

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಶಿವಮೊಗ್ಗ ರೆಡ್‌ಕ್ರಾಸ್ ಸಂಸ್ಥೆ ಕಾರ್ಯದರ್ಶಿ ಎ. ಜಿ. ಭಾಸ್ಕರ ರಾವ್ ಅವರು, ತಮ್ಮ ವಿದ್ಯಾಭ್ಯಾಸ ಸಮಯದಲ್ಲಿ ಆಶ್ರಯ ನೀಡಿ ನೆರವಿತ್ತ ತಮ್ಮ ಗುರುಗಳಾದ ಬಾಳಗಡಿ ದಿ॥ ಶ್ರೀ... ವಾಸರಾವ್ ಮತ್ತು ಅವರ ಪತ್ನಿಯ ... ಣಾರ್ಥ ಪರ್ಯಾಯ ಪಾರಿತೋಷಕ ... ಡುವುದಾಗಿಯೂ, ಪ್ರತಿ ವರ್ಷ ಕ್ರೀ... ತಗಲುವ ವೆಚ್ಚವನ್ನು ನೀಡುವುದಾಗಿಯ... ಘೋಷಿಸಿದರು.

ಸ್ಪರ್ಧೆಗಳಲ್ಲಿ ಭಾಗವಹಿಸಿದ ಎಲ್ಲಾ ... ರ್ಧಾಳುಗಳಿಗೂ, ತನು-ಮನ-ಧನ ಸ... ಯ ನೀಡಿದ ಎಲ್ಲರಿಗೂ, ಹಾಗೂ ಈ ಸ್ಪ... ಗಳು ಯಶಸ್ವಿಯಾಗಲು ಸಹಕರಿಸಿದ ... ರಿಗೂ ಸರ್ವೋದಯ ಯುವಕ ಸಂಘ ... ಜ್ಞತೆಯನ್ನು ಸಲ್ಲಿಸಿದೆ.

### ಅಂಗನವಾಡಿ ಕೇಂದ್ರಗಳ ಮುಚ್ಚುವಿಕೆಗೆ ವಿರೋಧ

ಕೊಪ್ಪ: ತಾಲ್ಲೂಕಿನಲ್ಲಿ ಹಲವಾರು ಅಂಗನವಾಡಿ ಕೇಂದ್ರಗಳನ್ನು ಮುಚ್ಚಲು ಯೋಚಿಸಲಾಗಿದೆ ಎಂಬ ವರದಿಗಳನ್ನಾಧರಿಸಿ, ಈ ಕ್ರಮವನ್ನು ಕೊಪ್ಪ ತಾ... ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕ... ಸಂಘ ತೀವ್ರವಾಗಿ ಖಂಡಿಸಿ, ಈ ಬಗ್ಗೆ ಮೇ 13ರಂದು ಬಾಲವಿಕಾಸ ಯೋಜನಾಧಿಕಾರಿಗಳ ಕಚೇರಿಯೆದುರು ಧರಣಿ ನಡೆಸಲು ನಿರ್ಧರಿಸಿದೆ.

ಸರ್ಕಾರಿ ಶಾಲೆಗಳಂತೆ ಅಂಗನವಾ... ಮಕ್ಕಳಿಗೂ ಉಚಿತ ಸಮವಸ್ತ್ರಗಳನ್ನು ನೀಡಬೇಕು ಹಾಗೂ ಅಂಗನವಾ... ಉದ್ಯೋಗಿಗಳ ಸೌಲಭ್ಯಗಳನ್ನು ಹೆಚ್ಚಿಸಬೇಕೆಂದು ಸಂಘವು ಸರ್ಕಾರವನ್ನು ಒತ್ತಾಯಿಸಿದೆ.

ಸರ್ಕಾರ ಅಂಗನವಾಡಿ ಮುಚ್ಚು... ಪ್ರಯತ್ನ ಮಾಡಿದಲ್ಲಿ ತೀವ್ರವಾದ ಚ... ವಳಿ ನಡೆಸಲೂ ತೀರ್ಮಾನಿಸಿದೆ.

### ಕಡಬಗೆರೆ ಮಹಿಳೆ ಕೊ... ಆರೋಪಿ ವಿಲಿಯಂ ಬಂ...

ಬಾಳೆಹೊನ್ನೂರು: ಇಲ್ಲಿಗೆ ಸಮೀ... ಕಡಬಗೆರೆಯಲ್ಲಿ ಏ. 1ರಂದು ದೇವ... ಎಂಬ ಮಹಿಳೆಯನ್ನು ಕೊಲೆ ಮಾ... ಆಕೆಯ ಕೊರಳಲ್ಲಿದ್ದ ಬಂಗಾರದ 17 ... ಡುಗಳನ್ನು ಕದ್ದೊಯ್ದಿದ್ದ ಅದೇ ಗ್ರಾ... ವಿಲಿಯಂ ಎಂಬಾತನನ್ನು ಪೋಲೀ... ಬೊಂಬಾಯಿಯಲ್ಲಿ ಮಾಲು ಸಮೇತ ... ಧಿಸಿದ್ದಾರೆ. ಸರ್ಕಲ್ ಇನ್‌ಸ್ಪೆಕ್ಟರ್ ಕೇ... ನಂದ್ ತನಿಖೆ ನಡೆಸಿದ್ದು, ನ. ರಾ. ಎಸ್ಸೈ ಭಂಡಾರಿ ಆರೋಪಿಯನ್ನು ಬ... ದರು. ಇವರಿಬ್ಬರ ಕಾರ್ಯವನ್ನು ಶ್ಲಾಘಿಸಿದ್ದಾರೆ.

# ಜಾದೂಗಾರ v/s ಮಂತ್ರವಾದಿ

ವರ್ಷದ ಅತ್ಯಂತ ಪ್ರತಿಭಾವಂತ ವ್ಯಕ್ತಿ ...ಗೆ ನೀಡಲಾಗುವ 25 ಲಕ್ಷ ರೂ. ಮೊ...ದ ಮೆಕ್ ಆರ್ಥರ್ ಅನುದಾನವನ್ನು ...ವರ್ಷ ಪಡೆದವರ ಪೈಕಿ ಒಬ್ಬ ಜಾದೂ...ರನೂ ಸೇರಿದ್ದಾನೆ. ಆತನ ಹೆಸರು ...ಮ್ಸ್ ರ‍್ಯಾಂಡಿ. ಆತನ ಕಸಬು–ಮಾಟ ...ಂತ್ರದ ಹೆಸರಿನಲ್ಲಿ ಮುಗ್ಧ ಜನರನ್ನು ...ೋಷಿಸುವ ದೈವೀ ಮಾನವರ ಕುಟಿಲ ತಂ...ಗಳನ್ನೆಲ್ಲ ಬಯಲಿಗೆಳೆಯುವುದು.

'ಅತ್ಯದ್ಭುತ ರ‍್ಯಾಂಡಿ' ಎಂದೇ ಅಮೇರಿ...ದಲ್ಲಿ ಪರಿಚಿತನಾಗಿರುವ 57 ವಯಸ್ಸಿನ ...್ಯಾಂಡಿ ವಿಶ್ವದ ಖ್ಯಾತ ಐಂದ್ರಜಾಲಿಕ...ಲ್ಲೊಬ್ಬ. ಆದರೆ ಕೇವಲ ಮನರಂಜನೆಗೆ ...ದೂ ವಿದ್ಯೆ ಪ್ರದರ್ಶಿಸುವ ಬದಲು ಆತ ...ದ ಹಲವು ವರ್ಷಗಳಿಂದ ದೇವಾಂಶ ...ಭೂತರೆಂದು ಹೇಳಿಕೊಳ್ಳುವ ಬಾಬಾಗಳ ...ದ್ಧ ಸಮರ ಸಾರಿದ್ದಾನೆ.

ನಮ್ಮಲ್ಲಿರುವಂತೆ ಪಾಶ್ಚಾತ್ಯ ದೇಶ...ಲ್ಲೂ ಮಂಕು ಬೂದಿ, ತೀರ್ಥ-ಪ್ರಸಾದ...ಂದ ರೋಗ ವಾಸಿ ಮಾಡುವ ಕಪಟ ...್ಯರ ಸಂಖ್ಯೆ ಸಾಕಷ್ಟು ಹೆಚ್ಚಿದೆ. ವ್ಯ...ಸ ಏನೆಂದರೆ, ಅಲ್ಲಿಯ ಢೋಂಗಿ ಪಂಡಿ... ಆಧುನಿಕ ವಿಜ್ಞಾನ– ತಂತ್ರಜ್ಞಾನದ ...ಾಯದಿಂದಲೇ ತಮ್ಮ 'ದೈವೀ ಶಕ್ತಿ' ...ಪ್ರದರ್ಶನ ಮಾಡುತ್ತಾರೆ. ಕಂಪ್ಯೂ...ಸಹಾಯದಿಂದ ಭಕ್ತವೃಂದದ ಖಾ... ಮಾಹಿತಿ (ಹೆಸರು, ಚರಿತ್ರೆ, ರೋಗ, ...ಪಾಸ್ತಿ, ಸಮಸ್ಯೆ ಇತ್ಯಾದಿ) ಸಂಗ್ರ...ಕೊಳ್ಳುತ್ತಾರೆ. ಕಿವಿಯಲ್ಲಿ ಅತಿಸೂಕ್ಷ್ಮ

> **ಮಾಟ-ಮಂತ್ರಗಳು, ತೀರ್ಥ–ವಿಭೂತಿಗಳು, ದೈವೀ ಶಕ್ತಿಗಳು— ಇಂಥವುಗಳಿಂದ ಜನಸಾಮಾನ್ಯರ ಸಮಸ್ಯೆ ಮತ್ತು ರೋಗಗಳಿಗೆ 'ಪರಿಹಾರ' ದೊರಕಿಸುತ್ತೇವೆನ್ನುವ 'ವಿಭೂತಿ ಪುರುಷ'ರು ವಿದೇಶಗಳಲ್ಲಿ ಸಹ ಚಲಾವಣೆಯಲ್ಲಿದ್ದಾರಂತೆ. ಭಾರತ ಸಂಜಾತರಾಗಿ ಶ್ರೀಲಂಕಾದಲ್ಲಿ ನೆಲೆಸಿದ್ದ ದಿ॥ ಡಾ. ಅಬ್ರಹಾಂ ಕೋವೂರ್ ಇಂಥ 'ದೈವೀ ವ್ಯಕ್ತಿ'ಗಳ ಕೈ ಚಳಕ-ಬಾಯಿಚಳಕಗಳನ್ನು ಬಯಲು ಮಾಡುತ್ತ, ಜನರಲ್ಲಿ ಪ್ರಜ್ಞೆ ಮೂಡಿಸಲು ಶ್ರಮಿಸುತ್ತಲೇ ಕೊನೆಯುಸಿರೆಳೆದರು.**
>
> **ವಿಶ್ವವಿಖ್ಯಾತ ಐಂದ್ರಜಾಲಿಕ ಜೇಮ್ಸ್ ರ‍್ಯಾಂಡಿ ಇಂಥದೇ ಧ್ಯೇಯಕ್ಕಾಗಿ ದುಡಿಯುತ್ತಿರುವ ಮತ್ತೊಬ್ಬ ಅಗ್ರಗಣ್ಯರು.**

ರೇಡಿಯೋ ರಿಸೀವರ್ ಇಟ್ಟುಕೊಂಡು, ಜನರ ಮಧ್ಯೆ ಓಡಾಡುತ್ತ ಅವರ ಸಮಸ್ಯೆಗಳನ್ನು ಮುಂಚಿತವಾಗಿಯೇ ಗುರುತಿಸಿ 'ಉಪದೇಶ' ನೀಡುತ್ತಾರೆ ಪೀಟರ್ ಪೊಪಾಫ್ ಎಂಬ ಖ್ಯಾತ 'ದೈವೀಶಕ್ತಿ'ಯ ವ್ಯಕ್ತಿಯ ರಹಸ್ಯವನ್ನು ರ‍್ಯಾಂಡಿ ಬಹಿರಂಗಗೊಳಿಸಿದ್ದ. ಇಂಥ ಢೋಂಗಿ ವ್ಯಕ್ತಿಗಳ ಉಪದೇಶಕ್ಕೆ ಮರುಳಾಗಿ ಭಕ್ತವೃಂದ ಅಮೂಲ್ಯ ಔಷಧಗಳನ್ನು ಕಸದ ಬುಟ್ಟಿಗೆ ಬಿಸಾಕಿ, ತೀರ್ಥ ಕುಡಿದು ರೋಗ ಉಲ್ಬಣ ಮಾಡಿಕೊಂಡಿದ್ದನ್ನೂ ರ‍್ಯಾಂಡಿ ಟೆಲಿವಿಷನ್ ಪ್ರದರ್ಶನಗಳಲ್ಲಿ ವಿವರಿಸಿದ.

ಭಾರತದಲ್ಲೂ ಜಾದೂಗಾರರ ಹಾಗೂ ಬಾಬಾಗಳ ಮಧ್ಯೆ ಅಗೋಚರ ಘರ್ಷಣೆ ಇದ್ದೇ ಇದೆ. ಬಂಗಾಲದ ಪಿ.ಸಿ. ಸರ್ಕಾರ್ (ಜ್ಯೂನಿಯರ್) ಖುದ್ದಾಗಿ ಸಾಯಿಬಾಬಾಗೇ ಖಾಲಿ ಕೈಯಲ್ಲಿ ರಸಗುಲ್ಲಾ ಸೃಷ್ಟಿಮಾಡಿ ನೀಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಕೇವಲ ವೃತ್ತಿ ಮಾತ್ಸರ್ಯ ಅಥವಾ ಹೊಟ್ಟೆಕಿಚ್ಚಿನ ದೃಷ್ಟಿಯಿಂದ ಬಾಬಾಗಳನ್ನು ಬಯಲಿಗೆಳೆದರೆ ಸಾಲದು. ಮುಗ್ಧ ಜನಕ್ಕೆ ಶಿಕ್ಷಣ ನೀಡುವುದೂ ಅದರ ಉದ್ದೇಶವಾಗಿರಬೇಕು ಎಂಬುದನ್ನು ಕೇರಳ ಶಾಸ್ತ್ರ (ವಿಜ್ಞಾನ) ಪರಿಷತ್ ತೋರಿಸಿಕೊಟ್ಟಿದೆ. ಅಲ್ಲಿನ ಪರಮಾನಂದ್ ಎಂಬವರು, ಇದಕ್ಕೆಂದೇ ಜಾದೂ ಕಲಿತು, **ಸಾಯಿಬಾಬಾ ಮಾಡುವ ಎಲ್ಲಾ ಮಾಟಗಳನ್ನೂ ಬಹಿರಂಗವಾಗಿ ಮಾಡಿ ತೋರಿಸುತ್ತಾರೆ.** ಬಸವನಗುಡಿ ನ್ಯಾಷನಲ್ ಕಾಲೇಜಿನ ವಿಜ್ಞಾನ ವೇದಿಕೆಯಲ್ಲಿ ಅವರು ನೀಡಿದ ಪ್ರದರ್ಶನ ಅನೇಕರನ್ನು ಮೂಕವಿಸ್ಮಿತರನ್ನಾಗಿ ಮಾಡಿದೆ. ವಾಚು, ಬೂದಿ, ತಾಯಿತಗಳನ್ನು ಶೂನ್ಯದಲ್ಲಿ ಸೃಷ್ಟಿಮಾಡುವ ತಂತ್ರಗಳನ್ನು ಅವರು ಪುಕ್ಕಟೆ ವಿವರಿಸುತ್ತಾರೆ. ಅದೂ ಒಂದು ಸಮಾಜಕಲ್ಯಾಣದ ಸಾಧನೆ ಎಂಬುದನ್ನು ಗುರುತಿಸಿ ಪ್ರೋತ್ಸಾಹಿಸುವ ಮನೋಭಾವ ನಮ್ಮ ವಿಜ್ಞಾನರಂಗದಲ್ಲಿ ಮೂಡಿದಾಗ ಪ್ರಾಯಶಃ ನಮ್ಮಲ್ಲೂ ಪ್ರತಿಭೆಗಳು ಬೆಳಕಿಗೆ ಬರಬಹುದು.

ಅಮೋನಿಯಮ್ ಅಕ್ಸಲೇಟ್, ಟಾರ್ಟರಿಕ್ ಆ್ಯಸಿಡ್‌ನಂಥ ರಸಾಯನ ಬಳಿದರೆ ಯಾವ ಫೋಟೋದಿಂದಾದರೂ ಬೂದಿ ಉದುರಿಸಬಹುದೆಂದು ಈಗ ಕಾಲೇಜು ವಿದ್ಯಾರ್ಥಿಗಳಿಗೂ ಗೊತ್ತಾಗಿದೆ. ನಿಕೆಲ್–ಟೈಟಾನಿಯಮ್‌ನ ಮಿಶ್ರಲೋಹವಾದ 'ನಿಟಿನಾಲ್'ನಲ್ಲಿ ಜ್ಞಾಪಕಶಕ್ತಿ ಇರುತ್ತದೆಂಬ ರಹಸ್ಯ ಮಾತ್ರ ಈಗಲೂ ಜಾದೂಗಾರರಿಗೆ ಮತ್ತು ಪ್ರಾಯಶಃ ಮಂತ್ರವಾದಿಗಳಿಗಷ್ಟೇ ಗೊತ್ತು. ಲೋಹವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಅದು ಇನ್ನೂ ಪ್ರಸ್ತಾಪ ಆಗಿಲ್ಲ. ಈ ಮಿಶ್ರ ಲೋಹವನ್ನೆ ಬಳಸಿ ಖ್ಯಾತ ಜಾದೂಗಾರ ಯೂರಿ ಗೆಲ್ಲರ್, 'ಮನೋಬಲ'ದಿಂದ ಎಂದು ಹೇಳಿಕೊಂಡು ಚಮಚ, ತಂತಿಗಳನ್ನು ಡೊಂಕು ಮಾಡುತ್ತಿದ್ದನೆಂದು ಇನ್ನೊಬ್ಬ ಖ್ಯಾತ ಜಾದೂಗಾರ ಹಾಗೂ ವಿಜ್ಞಾನ ಲೇಖಕ ಡಾ. ಮಾರ್ಟಿನ್ ಗಾರ್ಡ್‌ನರ್ ವಿವರಿಸಿದ್ದಾನೆ.

ರ‍್ಯಾಂಡಿಗೆ ನೀಡಲಾದ ಮೆಕ್ ಆರ್ಥರ್ ಅನುದಾನ ನಾಲ್ಕು ವರ್ಷಗಳ ಹಿಂದೆ ಕರ್ನಾಟಕದ ಕವಿ ಎ.ಕೆ. ರಾಮಾನುಜನ್ ಅವರಿಗೂ ಲಭಿಸಿದೆ ಐದು ವರ್ಷಗಳ ಅವಧಿಯಲ್ಲಿ ಈ ಮೊತ್ತವನ್ನು ಅವರು ತಮಗಿಷ್ಟ ಬಂದಂತೆ ವ್ಯಯಿಸಬಹುದು. ರ‍್ಯಾಂಡಿ ಈ ಹಣದಲ್ಲಿ ಕಂಪ್ಯೂಟರ್ ಕೊಳ್ಳಲು ನಿರ್ಧರಿಸಿದ್ದು ಮಾಯಾವಿಗಳ ವಿಶ್ವ ಮಾಹಿತಿ ಕೋಶವೊಂದು ರೂಪುಗೊಳ್ಳಲಿದೆ. ಅದರಲ್ಲಿ ಎಷ್ಟು ಮಂದಿ ಭಾರತೀಯ ಖ್ಯಾತನಾಮರ ಹೆಸರು ಸೇರ್ಪಡೆಯಾಗುತ್ತೋ ನೋಡಬೇಕು !

(ಸೌಜನ್ಯ : 'ಪ್ರಜಾವಾಣಿ')

---

## ಚಿನಾರಿ ಕೂಟ

### ಜಾಣ ಪ್ರಶ್ನೆಗಳು

...) ಭೂಮಿಗಿಂತ ಘನವಾದುದು ಯಾ...?

...) ಗಾಳಿಗಿಂತ ವೇಗವುಳ್ಳದ್ದು ಯಾ...?

...) ದೇಶಾಂತರಕ್ಕೆ ಹೋದವನಿಗೆ ...ರು ಯಾರು?

...) ಎಂಥ ಕಷ್ಟದಲ್ಲೂ ಮನುಷ್ಯನಿಗೆ ...ಯಕವಾಗುವುದು ಯಾವುದು?

...) ಭಾರತದ ಬೆನ್ನೆಲುಬು ಯಾರು?

...) ಪ್ರಪಂಚದಲ್ಲಿ ಇಲ್ಲದಿರುವ 3 ...ಗಳು ಯಾವುವು?

...) ಮಾನವರಲ್ಲಿ ಎಷ್ಟು ಜಾತಿ? ಯಾ...?

(ಉತ್ತರ ಮುಂದಿನ ಬಾರಿ)

ಸಂಗ್ರಹ: **ಡಿ.ಟಿ. ಅಶೋಕ್.**

[...ಜಾಣ ಮಕ್ಕಳೆ, ಈ ಜಾಣ ಪ್ರಶ್ನೆಗಳಿಗೆ ...ರಗಳನ್ನು ಬರೆದು 'ಚಿನಾರಿ ಕೂಟ' ...ಳಿಸಿ. ಅತಿ ಹೆಚ್ಚು ಸರಿ ಉತ್ತರ ಕಳಿ...ರಿಗೆ ಬಹುಮಾನವಿದೆ. ಯಾರಾದರೂ ...ರ್ಣ ಸರಿಯುತ್ತರ ಕಳಿಸಿದರೆ ಅವರಿಗೆ ...ಲ್ ಬಹುಮಾನ! (ಅದಕ್ಕಾಗಿ ನಿಮ್ಮ ...–ತಾಯಿ ಅಥವಾ ಹಿರಿಯರಿಂದ ಹೇ...ಳ್ಳಬಾರದು, ಹಾಂ?) ...ತ್ತರಗಳು ನಮಗೆ 15-5-87ರೊಳ...ುಹಿಸಬೇಕು. ನೀವೂ ಇಂಥದೇ ಜಾಣ ...ಗಳನ್ನು ಹುಡುಕಿ ಸಂಗ್ರಹಿಸಿ, ಉ...ಸಮೇತ ಕಳಿಸಬಹುದು. ಪ್ರಯತ್ನಿಸಿ.

**—ಸಂಪಾದಕ.]**

### ಏಕಬುದ್ಧಿ - ಸಹಸ್ರಬುದ್ಧಿ

ಕಾಡಿನ ಬದಿಯಲ್ಲಿ ಒಂದು ಕೊಳವಿತ್ತು. ಅದರಲ್ಲಿ ಮೀನು, ಕಪ್ಪೆ, ಏಡಿ ಮುಂತಾದ ಜಲಚರಗಳೆಲ್ಲ ವಾಸವಾಗಿದ್ದವು. ಅವುಗಳಲ್ಲಿ ಸಹಸ್ರಬುದ್ಧಿ ಮತ್ತು ಶತಬುದ್ಧಿ ಎಂಬ ಎರಡು ದೊಡ್ಡ ಮೀನುಗಳು, ಏಕಬುದ್ಧಿ ಎಂಬ ಕಪ್ಪೆ ಮತ್ತು ಅದರ ಹೆಂಡತಿ ತುಂಬ ಸ್ನೇಹದಿಂದಿದ್ದವು.

ಒಮ್ಮೆ ಆ ದಾರಿಯಾಗಿ ಇಬ್ಬರು ಮೀನುಗಾರರು ಹೋಗುತ್ತಿದ್ದರು. ಈ ಎರಡು ದೊಡ್ಡ ಮೀನುಗಳು ಅವರ ಕಣ್ಣಿಗೆ ಬಿದ್ದವು. ಅವರಲ್ಲೊಬ್ಬ ಕೂಡಲೇ ಅವುಗಳನ್ನು ಹಿಡಿಯೋಣವೆಂದ. ಅದಕ್ಕೆ ಇನ್ನೊಬ್ಬ ಹೇಳಿದ–

"ತಾಳು, ಅವಸರ ಮಾಡಬೇಡ. ಇನ್ನೂ ತುಂಬ ಮೀನುಗಳಿರಬಹುದು. ನಾಳೆಯ ದಿನ ನಮ್ಮ ಬಲೆಯನ್ನು ತಂದು ಅವುಗಳನ್ನು ಹಿಡಿಯೋಣ"

ಅಂತೆಯೇ ಅವರಿಬ್ಬರೂ ಹೊರಟು ಹೋದರು.

ಏಕಬುದ್ಧಿ ತನ್ನ ಗೆಳೆಯರಿಗೆ "ಅವರು ಮಾತಾಡಿಕೊಂಡಿದ್ದನ್ನು ಕೇಳಿದಿರಾ? ನಾಳೆ ಅವರು ಬರುವುದರೊಳಗಾಗಿ ನಾವು ಬೇರೊಂದು ಸುರಕ್ಷಿತವಾದ ಸ್ಥಳಕ್ಕೆ ಹೊರಟು ಹೋಗಿ ಬಿಡೋಣ" ಎಂದಿತು.

ಅದಕ್ಕೆ ಸಹಸ್ರ ಬುದ್ಧಿ ಹೇಳಿತು–"ಏನು ಮಾತು ಗೆಳೆಯ? ನಾಳೆ ಅವರು ಬಂದರಲ್ಲವೆ? ಅವರು ಬಾರದೆಯೂ ಇರಬಹುದು"

ಏಕಬುದ್ಧಿ ಹೇಳಿತು– "ಅವರು ಬಾರದಿದ್ದರೆ ಒಳ್ಳೆಯದೇ. ಆದರೆ ಅಕಸ್ಮಾತ್ ಅವರು ಬಂದೇ ಬಿಟ್ಟರೆ ಮತ್ತೆ ನಾವು ಅಪಾಯದಿಂದ ಪಾರಾಗಲು ಆಗುವುದಿಲ್ಲವಲ್ಲ".

"ಓಹೋ, ಹಾಗೊಂದು ವೇಳೆ ಅವರು ಬಂದರೂ ನನ್ನ ಬಳಿ ಸಹಸ್ರ ಉಪಾಯಗಳಿವೆ. ನಾವು ಸುಲಭವಾಗಿ ಪಾರಾಗಬಹುದು"

ಶತಬುದ್ಧಿಯೂ ದನಿಗೂಡಿಸಿತು– "ಹೌದು ಗೆಳೆಯ. ಅವರು ಬಂದಾರೆಂಬ ಭಯಕ್ಕೆ ನಾವು ಇಷ್ಟು ವರ್ಷಗಳಿಂದ ವಾಸವಿರುವ ಈ ಸ್ಥಳವನ್ನು ಬಿಡಬೇಕೆ? ಗೆಳೆಯನ ಸಹಸ್ರ ಉಪಾಯಗಳಲ್ಲದೆ ನನ್ನವೂ ನೂರು ಉಪಾಯಗಳಿವೆ. ಏನೂ ಭಯಪಡಬೇಡ. ಇಲ್ಲೇ ಹಾಯಾಗಿರೋಣ."

ಆದರೆ ಏಕಬುದ್ಧಿಗೆ ಈ ವಿಚಾರ ಸರಿ ಬರಲಿಲ್ಲ. ಅದು ಹೇಳಿತು — "ಇಲ್ಲ ಗೆಳೆಯರೆ. ಅವರು ಬಂದು ಬಲೆ ಬೀಸಿದ ಮೇಲೆ ತಪ್ಪಿಸಿಕೊಳ್ಳಲು ಪರದಾಡುವುದಕ್ಕಿಂತ ಈಗಲೇ ತಪ್ಪಿಸಿಕೊಳ್ಳುವುದು ಮೇಲು. ನಾನಂತೂ ನನ್ನ ಹೆಂಡತಿಯೊಂದಿಗೆ ನನಗೆ ಗೊತ್ತಿರುವ ಒಂದು ಸುರಕ್ಷಿತ ಸ್ಥಳಕ್ಕೆ ಹೋಗುತ್ತಿದ್ದೇನೆ."

ಇಷ್ಟು ಹೇಳಿ ಏಕಬುದ್ಧಿ ತನ್ನ ಹೆಂಡತಿಯೊಂದಿಗೆ ಆ ಕೊಳದಿಂದ ಹೊರಟು ಬಿಟ್ಟಿತು.

ಮರುದಿನ ಮೀನುಗಾರರು ಬಲೆಯೊಂದಿಗೆ ಬಂದೇ ಬಿಟ್ಟರು. ಅವರು ಕೊಳದಲ್ಲಿ ಬಲೆ ಬೀಸಿದಾಗ ಬೇರೆ ಜಲಚರಗಳ ಜೊತೆಗೆ ಸಹಸ್ರಬುದ್ಧಿ, ಶತಬುದ್ಧಿಗಳೂ ಅದರಲ್ಲಿ ಸಿಕ್ಕಿಹಾಕಿಕೊಂಡವು. ಎಷ್ಟು ಹೆಣಗಾಡಿದರೂ ತಪ್ಪಿಸಿಕೊಳ್ಳಲು ಆಗಲಿಲ್ಲ.

"ಅಯ್ಯೋ, ಈ ಬಲೆ ಬಹಳ ಗಟ್ಟಿಯಾಗಿದೆ. ನಾವು ಕೆಟ್ಟೆವು. ಒಮ್ಮೆ ಹೇಗಾದರೂ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿದ್ದರೆ ಏನಾದರೂ ಉಪಾಯ ಯೋಚಿಸಬಹುದಿತ್ತು...."

ಹೀಗೆಂದು ಅವು ಯೋಚಿಸುತ್ತಿರುವಷ್ಟರಲ್ಲೇ ಮೀನುಗಾರರು ಬಲೆಯನ್ನು ಹೊರಗೆಳೆದು ಹಾಕಿದರು. ಎಲ್ಲ ಮೀನು–ಏಡಿಗಳ ಜೊತೆಗೇ ಈ ಎರಡು 'ಬುದ್ಧಿವಂತ' ಮೀನುಗಳೂ ಒದ್ದಾಡಿ ಸತ್ತವು. ಮೀನುಗಾರರು ಬಹಳ ಸಂತೋಷದಿಂದ ಅವನ್ನೆಲ್ಲ ಹೊತ್ತುಕೊಂಡು ನಡೆದರು.

ಮರೆಯಲ್ಲಿ ಕುಳಿತು ಇದನ್ನೆಲ್ಲ ನೋಡುತ್ತಿದ್ದ ಏಕಬುದ್ಧಿ ತನ್ನ ಹೆಂಡತಿಯನ್ನು ಕುರಿತು, "ನೋಡಿದೆಯಾ? ಎಷ್ಟು ಬುದ್ಧಿವಂತರಾದರೇನು? ನನ್ನ ಒಂದು ಬುದ್ಧಿ ಮಾತನ್ನು ಅವರು ಸ್ವಲ್ಪ ಯೋಚಿಸಿದ್ದರೆ ಅವರೂ ಪಾರಾಗಬಹುದಿತ್ತಲ್ಲ!" ಎಂದು ಬಹಳ ದುಃಖದಿಂದ ಹೇಳಿತು. (ಸಂಗ್ರಹ)

## ಎಲೆ ಮರೆಯ ಕವಿ, ಸ್ವಾತಂತ್ರ್ಯ ಹೋರಾಟಗಾರ

# ಹೊ. ನ. ಕೃಷ್ಣಪ್ಪನವರಿಗೆ ಹುಟ್ಟೂರಿನಲ್ಲಿ ಆತ್ಮೀಯ ಸನ್ಮಾನ

ಗಾಢ ಮಲೆನಾಡಿನ ಎಲೆಮರೆಯ ಕವಿ, ಸ್ವಾತಂತ್ರ್ಯ ಹೋರಾಟಗಾರ ಹೊ. ನ. ಕೃಷ್ಣಪ್ಪನವರನ್ನು ಅವರ ಹುಟ್ಟೂರಾದ ಬೆಳವಿನಕೊಡಿಗೆಯ ಗ್ರಾಮಸ್ಥರು ಏ. 26 ರಂದು ಸರಳ, ಸುಂದರ ಸಮಾರಂಭದಲ್ಲಿ ಆತ್ಮೀಯವಾಗಿ ಸನ್ಮಾನಿಸಿದರು.

ಉತ್ತಮೇಶ್ವರದ 'ಸ್ವಯಂ ಸೇವಾ ಕೇಂದ್ರ'ದ ಗೆಳೆಯರು ಮುಂದಾಳ್ತನದಲ್ಲಿ ನಡೆದ ಈ ಸಮಾರಂಭದ ಅಧ್ಯಕ್ಷತೆಯನ್ನು ಕೊಪ್ಪದ ವೈದ್ಯಾಧಿಕಾರಿ ಡಾ|| ಎಂ. ಜಿ. ಪ್ರಸಾದ್ ವಹಿಸಿದ್ದರು. ಕೃಷ್ಣಪ್ಪನವರ ಬಹುಕಾಲದ ಒಡನಾಡಿಗಳೂ ಆತ್ಮೀಯರೂ ಆದ ಬಾಳ್ತಾರು ಆನಂದರಾಮ ಭಟ್ಟರು "ಇದೇ ಗ್ರಾಮದ ಹೊಸಹಳ್ಳಿಯಲ್ಲಿ ಹುಟ್ಟಿ ವಿಶ್ವ ಕುಟುಂಬಿಯಾಗಿ ಬೆಳೆದ" ಅವರ ಕಿರು ಪರಿಚಯ ಮಾಡಿಕೊಟ್ಟರು.

ಜಿಲ್ಲಾ ಪರಿಷತ್ ಸದಸ್ಯ ಬಿ. ಜಿ. ಚಿದಂಬರ್, ಮಂಡಲ ಪಂಚಾಯ್ತಿ ಸದಸ್ಯ ಬಿ. ಕೆ. ರಮೇಶ್, ಸಿರಿಮನೆ ನಾಗರಾಜ್ ಮತ್ತು ಡಾ|| ಪ್ರಸಾದ್ ಕೃಷ್ಣಪ್ಪನವರ ಜೀವನ–ಬರಹ–ದೃಷ್ಟಿಕೋನಗಳ ಬಗ್ಗೆ ಮಾತನಾಡಿದರು.

ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ನೋವುಂಡರೂ ಒಂದು 'ತಾಮ್ರ ಪತ್ರ'ವನ್ನೂ ಸಹ ಕೇಳದಿರುವ, ಅನಾರೋಗ್ಯ–ಕಡುಬಡತನಗಳಲ್ಲಿ ಬೇಯುತ್ತಿದ್ದರೂ ಸಹ, ಹಣಕಾಸಿನ ನೆರವು ಹಾಗಿರಲಿ, ಒಂದು ಹೊತ್ತಿನ ಊಟವನ್ನು ಕೂಡ ಯಾರಿಂದಲೂ ಬೇಡದಿರುವ ಕೃಷ್ಣಪ್ಪನವರ ಸ್ವಾಭಿಮಾನ; ಮೂಢನಂಬಿಕೆ, ಪೊಳ್ಳು 'ಪರೋಪಕಾರ', ಜಾತೀಯತೆಗಳ ವಿರುದ್ಧ ಸಿಡಿಯುತ್ತ ಭಾಷಾಭಿಮಾನ, ದೇಶಾಭಿಮಾನಗಳನ್ನೂ ವಿಶ್ವ ಭ್ರಾತೃತ್ವವನ್ನೂ ಪ್ರತಿಪಾದಿಸುವುದರ ಜೊತೆಗೆ, ಪ್ರೇಮ, ಪ್ರಕೃತಿ, ಸಮಾಜ–ಈ ಎಲ್ಲ ವಿಚಾರಗಳಲ್ಲೂ ಸ್ಪಂದಿಸುವ ಅವರ ಕವಿ ಹೃದಯ–ಇವುಗಳನ್ನು ಕುರಿತು ಭಾಷಣಕಾರರು ತಮ್ಮ ಅನುಭವಗಳನ್ನು ಮೆಲುಕು ಹಾಕಿದರು.

ಕೃಷ್ಣಪ್ಪನವರು ಮಾತನಾಡುತ್ತ, ತಮ್ಮ ಕಿರು ಸಾಹಿತ್ಯ ಕೃಷಿಯನ್ನು ಗುರ್ತಿಸಿ ಪುರಸ್ಕರಿಸಿದ ಎಲ್ಲರಿಗೂ ಧನ್ಯವಾದ ಸಲ್ಲಿಸಿದರು. ಸಮಾಜದಲ್ಲಿ ಒಳಿತಿನ ಬಗ್ಗೆ ಕಾಳಜಿ ಇಲ್ಲದವನಿಗೆ ಸಹೃದಯತೆ ಬರುವುದಿಲ್ಲ. ಸಹೃದಯತೆ ಇಲ್ಲದೆ ಕವನ ಅರ್ಥವಾಗುವುದಿಲ್ಲ. ಇಂದು ನಮ್ಮ ಸಮಾಜದಲ್ಲಿ ಪ್ರತಿಭೆಯನ್ನು ಗುರುತಿಸುವುದಕ್ಕೂ ಜಾತಿಯೇ ಮಾನದಂಡವಾಗುವಷ್ಟರ ಮಟ್ಟಿಗೆ ಜಾತೀಯತೆ ತುಂಬಿದೆ. ಇದನ್ನು ತೊಡೆದು ಸಾನೆಲ್ಲ ಒಂದೇ ಕುಟುಂಬದವರೆಂಬ ಭಾವನೆ ಬೆಳೆಯದೆ ಹೋದಲ್ಲಿ ಈ ದೇಶದ ಸಂಸ್ಕೃತಿ ನಾಮಾವಶೇಷ ಹೊಂದೀತು ಎಂದು ಎಚ್ಚರಿಸಿದರು.

ಮಲೆನಾಡಿನ ಎಲ್ಲೆಡೆ ಇಂಥ ಎಷ್ಟೋ ಮಂದಿ ಉತ್ತಮ ಕವಿಗಳೂ ಕಲಾವಿದರೂ ಮರೆಯಾಗಿದ್ದಾರೆ. ಅಂಥವರಲ್ಲಿ ಬಹುತೇಕ ಜನ ಕಷ್ಟ ಕಾರ್ಪಣ್ಯಗಳಲ್ಲಿ ನಲುಗಿ ಹೋಗುತ್ತಿದ್ದಾರೆ. ಕಲಾವಿದರ ಇಂಥ ದುರ್ಭರ ಪರಿಸ್ಥಿತಿಗಳಿಂದಾಗಿ, ಮಲೆನಾಡಿಗೇ ವಿಶಿಷ್ಟವಾದ ಎಷ್ಟೋ ಕಲಾ ಪ್ರಕಾರಗಳೇ ಇಂದು ಅಳಿದು ಹೋಗುವ ಅಂಚಿನಲ್ಲಿವೆ. ಮನುಷ್ಯನಿಗೂ ಪ್ರಾಣಿಗಳಿಗೂ ಅಂತರವಿರುವುದೇ ಕಲೆ–ಸಾಹಿತ್ಯಗಳಿಂದೊಡಗೂಡಿದ ಮನುಷ್ಯನ ಈ ಸಾಂಸ್ಕೃತಿ ಮುಖದಲ್ಲಿ. ಆದ್ದರಿಂದ ನಮ್ಮ ಬದುಕಿನ ಜೀವಂತಿಕೆಗೆ ಅತ್ಯವಶ್ಯಕವಾದ ಈ ಸಾಂಸ್ಕೃತಿಕ ಬೆಳವಣಿಗೆಗೆ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯ್ತಿಗಳು ನಿಜವಾದ ಕಾಳಜಿಯಿಂದ, ವಿಶೇಷವಾದ ಮತ್ತು ನಿರಂತರವಾಗಿ ಉಳಿದು ಬರುವಂಥ ಸಮಗ್ರ ಕಾರ್ಯಕ್ರಮವೊಂದನ್ನು ರೂಪಿಸಬೇಕು. ಇದು ಗ್ರಾಮೀಣ ಅಭಿವೃದ್ಧಿಗಾಗಿಯೇ ರೂಪಿತವಾದ ಅವುಗಳ ಕರ್ತವ್ಯದ ಒಂದು ಅವಿಭಾಜ್ಯ ಅಂಗವೇ ಆಗಿದೆ –ಎಂದು 'ಸ್ವಯಂ ಸೇವಾ ಕೇಂದ್ರ'ದವರ ಒತ್ತಾಯಪೂರ್ವಕವಾದ ಸೂಚನೆಯನ್ನು ಸಿರಿಮನೆ ನಾಗರಾಜ್ ಮುಂದಿಟ್ಟರು.

ಇದಕ್ಕಾಗಿ ಜಿಲ್ಲಾ ಪರಿಷತ್ ಅಡಿಯ... ಒಂದು ಪ್ರತ್ಯೇಕ ಟ್ರಸ್ಟನ್ನೇ ರಚಿಸಬೇಕು ಎಂದ ಡಾ|| ಪ್ರಸಾದ್, ಟ್ರಸ್ಟ್ ಎಂದ... ಅಂತುಕೆಯಂಥವರ ಟ್ರಸ್ಟ್‌ಗಳಂತಾಗದಿರ... ಎಂದೂ ಮುನ್ನೆಚ್ಚರಿಕೆಯ ಮಾತು ಹೇ... ದರು.

ಇತ್ತೀಚೆಗೆ ಪ್ರಕಟವಾದ ಕೃಷ್ಣಪ್ಪನ... ಕವನಗಳ ಕಿರು ಸಂಕಲನ 'ಹೂದುಂಬಿ'ಯ... ಕೆಲವು ನೂರು ಪ್ರತಿಗಳನ್ನು ಮಾರು... ಮೂಲಕ ಸಣ್ಣ ಮೊತ್ತವೊಂದನ್ನು ಸ... ಗ್ರಹಿಸಿ ಅದನ್ನು ಕೃಷ್ಣಪ್ಪನವರಿಗೆ ಅರ್ಪಿ... ಲಾಯಿತು.

ಡಾ|| ಪ್ರಸಾದ್ ಮತ್ತು ತಮ್ಮ ಗೆ... ಯರೊಂದಿಗೆ ಈ ಕಾರ್ಯಕ್ರಮವನ್ನು ಸ... ಯೋಜಿಸಿದ್ದ ಉತ್ತಮೇಶ್ವರದ ವೈದ್ಯಾ... ಕಾರಿ ಡಾ|| ಕೋದಂಡರಾಮ್ ಸ್ವಾಗ... ಭಾಷಣ ಮಾಡುತ್ತ, ಸಮಾಜದ ಋ... ವನ್ನು ಯಥಾಶಕ್ತಿ ತೀರಿಸುತ್ತಿರುವ ಇಂ... ಕವಿ–ಕಲಾವಿದರ ಕಾರ್ಯವನ್ನು ಗುರುತಿ... ಪುರಸ್ಕರಿಸುವುದು ಆರೋಗ್ಯವಂತ ಸಮ... ಜದ ಒಂದು ಕರ್ತವ್ಯ ಎಂದರಲ್ಲದೆ, 'ಹ... ದುಂಬಿ' ಪುಸ್ತಕವನ್ನು ಎಲ್ಲರೂ ಕೊಂ... ಕೊಳ್ಳುವಂತೆ ಸೂಚಿಸಿದರು. ಸೇವಾ ಕೇ... ದ್ರದ ಕಾರ್ಯದರ್ಶಿ ಗಂಗಾಧರ್ ವಂ... ದರು.

ಬೆಂಗಳೂರಿನ ಪದ್ಮಾ ಗುರುರಾಜ್ ... ರಿಂದ ಸುಗಮ ಸಂಗೀತ ಮತ್ತು ನಾ... ಯ ಕೆ.ಎಸ್. ಕೃಷ್ಣಮೂರ್ತಿಯವರಿ... ಪ್ರತಿಭಾ ಪ್ರದರ್ಶನಗಳನ್ನೊಳಗೊಂ... ಮನರಂಜನಾ ಕಾರ್ಯಕ್ರಮದೊಂ... ಸಮಾರಂಭ ಮುಕ್ತಾಯವಾಯಿತು.

---

### ಪದ್ಯದಂಕಣ

#### ಬಾಡಿಗೆ ತಲೆಯುವರು

ಬಾಡಿಗೆಯ ತಲೆಯುವರು  
ಬಹು ಮಂದಿ ನಾವು, ನಮ್ಮವರು,  
ನಮ್ಮಜ್ಜ, ಮುತ್ತಜ್ಜಗಳು.  
ಮಹೇಂದ್ರಜಾಲಿಗರ ಮಾತುಗಳ ಕೇಳಿ  
ಮನದಿ ಹರುಷವ ತಾಳಿ  
ಮನ ಸೋತು ಮರುಳಾಗುವವರು.

ಜರತಾರಿ ಜಗದ್ಗುರುವರರ  
ಪಾದ ಪೂಜೆಯ ಮಾಡಿ, ಆ ಜಲವ  
ಕುಡಿದು ತೃಪ್ತಿ ಪಡೆದು  
ಪಾದಧೂಳನು ಮುಡಿದು  
ಮುಕ್ತಿ ಪಡೆದು  
ಧನ, ಕನಕ, ಗೋದಾನ, ಭೂದಾನ  
ಎಲ್ಲವನು ನೀಡಿ ಕೊಂಡಾಡಿ

ಹಗಲಿರುಳು ಹೆಂಡವನು ಕುಡಿದು  
ಹೆಬ್ಬೆರಳನೊತ್ತಿದರು  
ಅಜ್ಜ ಮುತ್ತಜ್ಜಗಳು.  
ಮಳ್ಳಕು ಮರಿಗಳಿಗೂ  
ಭಿಕ್ಷೆ ಪಾತ್ರೆಯ ಕೊಡಿಸಿ  
ತೃಪ್ತರಾದರು ನಮ್ಮ ಪೂರ್ವಜರು

ಮುತ್ತುಗಳ ರತ್ನಗಳ  
ವಜ್ರ ವೈಡೂರ್ಯಗಳ ಕಿರೀಟವನ್ನಿಟ್ಟು  
ಬಗೆ ಬಗೆಯ ಬಂಗಾರದೊಡವೆಗಳ  
ತೊಟ್ಟು  
ಪಟ್ಟೆ ಪೀತಾಂಬರ ಮಡಿಯುಟ್ಟು  
ನಮ್ಮನೆಲ್ಲರ ಹೊರಗಿಟ್ಟು

ಆನೆ ಕುದುರೆಗಳುಂಟು  
ಮಂದಿ ಮಾರ್ಬಲ ಉಂಟು  
ಹೊಗಳು ಭಟ್ಟಂಗಿಗಳ ಗುಂಪು  
ಬೇರುಂಟು  
ಜಗದ ಗುರು ಎಂದೆಂಬ ಬಿರುದು  
ಮತ್ತುಂಟು  
ದಂಡವನು ನೀಡುವರು ಬಾಡಿಗೆಯ  
ತಲೆಯುವರು

ರಾಜಕೀಯ ಸವನಂಟು ಸದಾ ಉಂಟು  
ಮುಂದುಗಡೆ ಬಾಗಿಲಲಿ ಧರ್ಮ  
ಪ್ರವಚನಗಳುಂಟು  
ಹಿಂದುಗಡೆ ಬಾಗಿಲಲಿ ದೇವದಾಸಿಯರು  
ಇನ್ನೂ ಬೇಕಿದ್ದರೆ, ಗುಪ್ತ ವೇಶ್ಯೆಯರು

—ಹೊ. ನ. ಕೃಷ್ಣಪ್ಪ

---

# "ಮಲೆನಾಡಲ್ಲಿ ಹೊಸದಾಗಿ ನೀಲಗಿರಿ ನೆಡುತ್ತಿಲ್ಲ"

## —ಅರಣ್ಯಾಧಿಕಾರಿ ಸ್ಪಷ್ಟನೆ

ಕೊಪ್ಪ : ವಾರ್ಷಿಕ 40 ಅಂಗುಲಕ್ಕಿಂತ ಕಡಿಮೆ ಮಳೆ ಬೀಳುವ ಭೂಮಿ ಮಲೆನಾಡಿನಲ್ಲಿಲ್ಲವಾದ್ದರಿಂದ ಇಲ್ಲಿ ಈಗ ಹೊಸದಾಗಿ ಎಲ್ಲೂ ನೀಲಗಿರಿ ನೆಡುತ್ತಿಲ್ಲ ಎಂದು ಕೊಪ್ಪ ವಲಯ ಅರಣ್ಯಾಧಿಕಾರಿ ಗೋಪಾಲ್ ಸಿಂಗ್ ಸ್ಪಷ್ಟ ಪಡಿಸಿದ್ದಾರೆ.

ಅಂದಗಾರಿನ ಬಳಿ ಇಲಾಖೆಯವರು ನೀಲಗಿರಿ ನೆಡುತ್ತಿದ್ದಾರೆ ಎಂದು ಈಚೆಗೆ ಕೆಲ ರೈತರು ಗಾಬರಿಯಿಂದ ಪತ್ರಿಕೆಗೆ ತಿಳಿಸಿದಾಗ ಅರಣ್ಯಾಧಿಕಾರಿಯವರನ್ನು ಕೇಳಿದ್ದಕ್ಕೆ ಈ ರೀತಿ ತಿಳಿಸಿದರು.

ಇದೇ ರೀತಿ ಈಚೆಗೆ ಎಲ್ಲ ಕಡೆ ಬೆಳೆಸಲಾಗುತ್ತಿರುವ ಅಕೇಸಿಯಾ ಸಸ್ಯದ ಬಗ್ಗೆ ಕೂಡ ರೈತರಲ್ಲಿ ಇರುವ ಸಂದೇಹ ಅನವಶ್ಯಕ ಎಂದು ಅವರು ಹೇಳುತ್ತಾರೆ. ಅವರ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಕೊಟ್ಟಿದೆ.

ಅಕೇಸಿಯಾ ಕೂಡ ರೇಯಾನ್‌ಗೆ ಉಪಯೋಗಿಸಲ್ಪಡುತ್ತದೆಂಬ ನಂಬಿಕೆಯಿದೆ. ಅದು ತಪ್ಪು. ರೇಯಾನ್‌ಗೆ ನೀಲಗಿರಿ ಸಸ್ಯ ಮಾತ್ರ ಬೇಕು. ಬೇರಾವುದೂ ಆಗದು. ಅಕೇಸಿಯಾವು ಹೈಗದ ನಂತರ ಅತ್ಯುತ್ಕೃಷ್ಟವಾದ ಕಟ್ಟಿಗೆ. ಇದು ಹೆಚ್ಚೆಂದರೆ ಕಾಗದ ತಯಾರಿಕೆಗೆ ಬರಬಹುದೆಂಬ ಸೂಚನೆಯಿದ್ದೂ ಸಂಶೋಧನೆ ನಡೆಯುತ್ತಿದೆ ಅಷ್ಟೇ.

ರೈತರಿಗೆ ಕೊಡುವ ಸಸಿಗಳಲ್ಲಿ ಈ ಅಕೇಸಿಯ, ಸರ್ವೆ, ರೈನ್ ಟ್ರೀ ಇಂಥವನ್ನು ಕೂಡ ಸೇರಿಸುತ್ತಿಲ್ಲ. ಅನಿವಾರ್ಯವಾದಾಗ ಮಾತ್ರ ಕೊಡುತ್ತಿದ್ದೇವೆ. ರೈತರಿಗೆ ಬೇಕಾದ ಜಾತಿಯ ಸಸ್ಯಗಳನ್ನೇ ಯಥೇಚ್ಛವಾಗಿ ಬೆಳೆಸಿ ಹಂಚುತ್ತಿದ್ದೇವೆ.

ಇಲಾಖೆಯ ನೆಡುತೋಪುಗಳಲ್ಲಿ ಅಕೇಸಿಯಾವನ್ನು ವ್ಯಾಪಕವಾಗಿ ಬೆಳೆಸುತ್ತಿರುವುದಕ್ಕೆ ಬಹು ಮುಖ್ಯ ಕಾರಣವೆಂದರೆ ನಮ್ಮಲ್ಲಿ ಬೋಳಾಗಿರುವ, ಬಂಜರು ಬಿದ್ದಿರುವ ಭೂಮಿಯನ್ನು ತುರ್ತಾಗಿ ಯಾವುದಾದರೂ ರೀತಿಯ ಸಸ್ಯದಿಂದ ಆವೃತಗೊಳಿಸಲೇ ಬೇಕಾಗಿರುವುದು. ಸ್ಥಳೀಯ ಜಾತಿಯ ಸಸಿಗಳಾದರೆ ಅವನ್ನು 30 ಅಡಿಗೊಂದರಂತೆ ಬೆಳೆಸಬೇಕು. ಅವುಗಳ ಬೆಳವಣಿಗೆಯೂ ಅತ್ಯಂತ ನಿಧಾನ. ಅವು ಭೂ... ಯನ್ನು ಆವರಿಸಿಕೊಳ್ಳುವಷ್ಟು ಬೆಳೆ... ಬೇಕಾದರೆ ಹತ್ತಿಪ್ಪತ್ತು ವರ್ಷಗಳೇ ಬೇ... ಗುತ್ತವೆ. ಆ ಅವಧಿಯಲ್ಲಿ ಜಾನುವಾ... ಗಳಿಂದ ಅವುಗಳ ರಕ್ಷಣೆ ಕೂಡ ಸಾ... ವಲ್ಲದ ಕೆಲಸ.

ಆದರೆ 6 ಅಡಿಗೊಂದರಂತೆ ಬೆಳೆಸಬ... ದಾದ ಅಕೇಸಿಯ ಕೇವಲ 2–3 ವ... ದೊಳಗೆ ಭೂಮಿಯನ್ನು ಚೆನ್ನಾಗಿ ಆವ... ಕೊಳ್ಳುತ್ತದೆ. ಈ ಗಿಡಗಳ ನಡುವೆ ಸ್ಥ... ಯ ಜಾತಿಯ ಸಸ್ಯಗಳನ್ನೂ ಬೆಳೆಸುವ... ರಿಂದ ಅವುಗಳಿಗೆ ಜಾನುವಾರುಗಳಿಂದ ... ಣೆಯೂ ನೆರಳೂ ಸಿಕ್ಕಿ ಅವು ಕೂಡ ಚೆನ್ನಾ... ಗಿ ಬೆಳೆಯುತ್ತವೆ. ಈಗ ಇಲಾಖೆ ಎಲ್ಲ ... ಗಳಲ್ಲೂ ಈ ರೀತಿಯ ಮಿಶ್ರ ತೋಪು... ನ್ನೇ ಬೆಳೆಸುತ್ತಿದೆ.

ಹೀಗೆ ಭೂಮಿಯನ್ನು ಸಸ್ಯಗಳಿಂದ ... ರಿಸುವುದರಿಂದ ಮಣ್ಣಿನೊಳಗೆ ಸಾರಜ... ವನ್ನು ಉತ್ಪತ್ತಿ ಮಾಡುವ ಬ್ಯಾಕ್ಟೀ...

(4ನೇ ಪುಟ...

## ತೋಟಕಾರ್ಮಿಕರ ವೈದ್ಯಕೀಯ ಯೋಜನೆ ಜಾರಿಗೊಳಿಸಲು ಆಗ್ರಹ

ಚಿಕ್ಕಮಗಳೂರು: ಕಾರ್ಮಿಕರಿಗೂ, ಸರ ಮತ್ತು ಮಾಲೀಕರಿಗೂ ಈಗಾ ಆಗಿರುವ ವೈದ್ಯಕೀಯ ಯೋಜನೆಗೆ ಂಧಪಟ್ಟ ಒಪ್ಪಂದವನ್ನು ಕೂಡಲೇ ಗೊಳಿಸಬೇಕೆಂದು ಎ.ಐ.ಟಿ.ಯು.ಸಿ. ತ್ವದ ತೋಟ ಕಾರ್ಮಿಕರ ಸಂಘದ ಸಮಿತಿ ಸಭೆ ಆಗ್ರಹಿಸಿದೆ.

ಈ ಒಪ್ಪಂದವನ್ನು "ಪುನರ್ ಶೀಲಿಸಲು" ಸಮಿತಿಯೊಂದನ್ನು ರಚಿಸಿ, ಕ್ಕೆ ಪ್ರಶ್ನಾವಳಿಯೊಂದನ್ನು ಕಳಿಸಿ ದ್ದಿರುವುದನ್ನು ಚರ್ಚಿಸಿದ ಸಭೆಯು, ತೋಟ ಕಾರ್ಮಿಕರಿಗೆ ಉಚಿತವಾಗಿ ಬೇಕಾದ ವೈದ್ಯಕೀಯ ಸೌಲಭ್ಯದ ಜವಾಬ್ದಾರಿಯಿಂದ ಮಾಲೀಕರನ್ನು ಬಿಡು ಗೊಳಿಸಿ, ಸರ್ಕಾರಿ ಆಸ್ಪತ್ರೆಯನ್ನು ಅವಲಂಬಿಸುವಂತೆ ಮಾಡುವ ಕುತಂತ್ರ ವೆಂದು ಪರಿಗಣಿಸಿತಲ್ಲದೆ, ಆ ಸಮಿತಿಯ ತೀರ್ಮಾನಗಳನ್ನು ತಿರಸ್ಕರಿಸಲು ನಿರ್ಧರಿಸಿತು.

ಈ ನಿಟ್ಟಿನಲ್ಲಿ, ಚುನಾಯಿತ ಶಾಸಕರು ಮತ್ತು ಮಂತ್ರಿಗಳು ಕಾರ್ಮಿಕರ ಹಿತಾಸಕ್ತಿ ಕಾಪಾಡಲು ಉದ್ದೇಶ ಪೂರ್ವಕವಾಗಿ 'ವಿಫಲ'ವಾಗುತ್ತಿರುವುದನ್ನು ಪ್ರತಿಭಟಿಸುವ ಸಲುವಾಗಿ, ತೋಟ ಕಾರ್ಮಿಕರು ವಾಸಿಸುವ ಪ್ರದೇಶಗಳಲ್ಲಿ ನಡೆಯುವ ಇಂಥವರ ಸಭೆಗಳನ್ನು ಮೇ ತಿಂಗಳ ಪೂರ್ತಿ ಬಹಿಷ್ಕರಿಸಲು ನಿರ್ಧಗಿಸಿ, ಅದಕ್ಕಾಗಿ ವಿಭಾಗೀಯ ತಂಡಗಳನ್ನು ರಚಿಸಲಾಯಿತು.

ದೇಶವ್ಯಾಪ್ತಂತ ಕಾನೂನುಬಾಹಿರವಾಗಿ ಕಾರ್ಖಾನೆಗಳ ಮುಚ್ಚುವಿಕೆಯಿಂದಾಗಿ ಲಕ್ಷಾಂತರ ಕಾರ್ಮಿಕರು ಬೀದಿ ಪಾಲಾಗುತ್ತಿರುವುದನ್ನು ತಡೆಗಟ್ಟಲು ಸರ್ಕಾರವು ವಿಫಲವಾಗಿರುವುದನ್ನು ಖಂಡಿಸಲು ಈ ಸಲದ ಮೇ ದಿನಾಚರಣೆಯನ್ನು ಕಾರ್ಖಾನೆಗಳ ಮುಚ್ಚುವಿಕೆ ವಿರೋಧಿ ದಿನವಾಗಿಯೂ ಆಚರಿಸಲು ನಿರ್ಧರಿಸಲಾಯಿತು.

### 'ಡಿ' ಗ್ರೂಪ್ ನೌಕರರ ಸಭೆ

ಕೊಪ್ಪ: ರಾಜ್ಯ ಸರ್ಕಾರಿ 'ಡಿ' ಗ್ರೂಪ್ ನೌಕರರ ತಾ|| ಸಂಘದ ಸಭೆ ಏ. 22ರಂದು ಇಲ್ಲಿ ಸಂಘದ ಜಿಲ್ಲಾ ಅಧ್ಯಕ್ಷ ಗೋವಿಂದಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಫೆ. 25 ರಂದು ಆಯ್ಕೆಯಾದ ಕಾರ್ಯಕಾರಿ ಸಮಿತಿಯನ್ನು ಸಭೆ ಅನುಮೋದಿಸಿತಲ್ಲದೆ, ಸಂಘದ ಕಟ್ಟಡಕ್ಕೆ ಹಣ ಸಂಗ್ರಹಿಸುವುದಕ್ಕಾಗಿ ಜನಪ್ರಿಯ ಸಿನಿಮಾ ನಟ-ನಟಿಯರನ್ನು ಕರೆಸಿ ಕಾರ್ಯಕ್ರಮ ಏರ್ಪಡಿಸಬೇಕೆಂದು ತೀರ್ಮಾನಿಸಿತು.

### ಸಾಮೂಹಿಕ ವಿವಾಹ

ಕೊಪ್ಪ: ಇಲ್ಲಿನ ಬಾಳಗಡಿಯ ವಿದ್ಯಾ ಮಹಿಳಾ ಸಮಾಜ, ಚೇತನ ಯುವತಿ ಮಂಡಳಿ, ಹಿರೇಗದ್ದೆ ಯುವಕ ಸಂಘ ಹಾಗೂ ಯುವಜನ ಸೇವಾ ಇಲಾಖೆಗಳ ಆಶ್ರಯದಲ್ಲಿ 7 ಜೊತೆ ಸಾಮೂಹಿಕ ವಿವಾಹ ಚಿಟ್ಟಿ ಮಕ್ಕಿ ದೇವಸ್ಥಾನದಲ್ಲಿ ಈಚೆಗೆ ನೆರವೇರಿತು.

## "ಮಲೆನಾಡಿನಲ್ಲಿ ಹೊಸದಾಗಿ ನೀಲಗಿರಿ ನೆಡುತ್ತಿಲ್ಲ"

(1ನೇ ಪುಟದಿಂದ)

ರಕ್ಷಣೆ ದೊರೆತು ಅವುಗಳ ಚಟುವಟಿಕೆ ಹೆಚ್ಚುತ್ತದೆ. ಇದರಿಂದ ಹೆಚ್ಚೆಚ್ಚು ಸಂವೃದ್ಧಿಯಾಗುತ್ತದೆ. ಇಲ್ಲದಿದ್ದರೆ ಬ್ಯಾಕ್ಟೀರಿಯಗಳು ನಶಿಸುತ್ತ, ಭೂಮಿ ಹೆಚ್ಚು ಬಂಜರಾಗುತ್ತ ಹೋಗುತ್ತದೆ. ಆದ್ದರಿಂದ, ವ್ಯಾಪಕ ಭೂ ಸವಕಳಿಯನ್ನು ತಡೆಯುವುದಕ್ಕೂ ಸಸ್ಯಾವರಣ ಅತ್ಯಗತ್ಯ. ಇದರಿಂದ ಮಳೆಯೂ ಹೆಚ್ಚಿ ಒಟ್ಟಾರೆ ನಿಸರ್ಗದ ಕ್ರಮಬದ್ಧವಾಗಿ ಚಲಿಸುವಂತಾಗುತ್ತದೆ.

ಹೀಗೆ ಒಮ್ಮೆ 10-12 ವರ್ಷ ಬೆಳೆದ ನೀಲಗಿರಿಯನ್ನು ಕಡಿದಾಗ ಅಷ್ಟು ಹೊತ್ತಿಗೆ ಅದರಡಿಯ ಸ್ಥಳೀಯ ಜಾತಿಯ ಸಸ್ಯಗಳೂ ತಕ್ಕ ಮಟ್ಟಿಗೆ ಬೆಳೆದಿದ್ದು, ಜಾನುವಾರು ಬಾಯಿಗೆ ಸಿಕ್ಕದಷ್ಟಾಗಿರುತ್ತವೆ. ಅನಂತರ ಬೇಕಾದರೆ ಅವುಗಳನ್ನು ಹಾಗೆಯೇ ಬಿಟ್ಟರೆ ಸಾಕು. ಅವು ಭೂಮಿಯನ್ನು ಆವರಿಸಿಕೊಳ್ಳುತ್ತವೆ. ಸ್ಥಳೀಯ ಜಾತಿಯ ಕಾಡುಗಳನ್ನು ಬೆಳೆಸಲು ಇದು ಅತ್ಯಂತ ಉಪಯುಕ್ತವೂ ಸುಲಭಸಾಧ್ಯವೂ ಆದ ವಿಧಾನ. ಅಲ್ಲದೆ ಇದರಿಂದ ಉತ್ತಮ ದರ್ಜೆಯ ಕಟ್ಟಿಗೆ ಹಾಗೂ ಸೊಪ್ಪು ಕೂಡ ಯಥೇಚ್ಛವಾಗಿ ದೊರೆಯುತ್ತದೆ. ಆಕೇಸಿಯದಿಂದ ಪರಿಸರಕ್ಕೆ ಕೂಡ ಯಾವುದೇ ಹಾನಿ ತಟ್ಟುವುದಿಲ್ಲ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 32ನೇ ಸಂಚಿಕೆ ಕೊಪ್ಪ 3-5-1987 ಭಾನುವಾರ ಬೆಲೆ 50 ಪೈಸೆ




ದಯಂಬಳ್ಳಿ ಸುತ್ತಮುತ್ತ ಹುಡುಗಿಯರ ಸಾಗಾಟದ ಗುಲ್ಲು:

## ನಿಜ ಸಂಗತಿ ಬಯಲಾಗುವುದೆ?

ಕೊಪ್ಪ: ಈ ತಾಲ್ಲೂಕಿನ ದಯಂಬಳ್ಳಿ ಗ್ರಾಮದಿಂದ ಮೂವರು ಹರಿಜನ ಯುವತಿಯರು ಕಾಣೆಯಾಗಿದ್ದಾರೆನ್ನಲಾಗಿದ್ದು, ಅವರನ್ನು ಬೊಂಬಾಯಿಗೆ ಕರೆದೊಯ್ಯಲಾಗಿದೆಯೆಂಬ ಗುಮಾನಿಯನ್ನು ಅವರ ತಂದೆ-ತಾಯಿಗಳು ವ್ಯಕ್ತಪಡಿಸುತ್ತಿದ್ದಾರೆ.

ಅಲ್ಲಿನ ಶೇಷಯ್ಯ ಎಂಬವರ ಒಬ್ಬ ಮಗಳು ಮತ್ತು ಕೆಂಚಯ್ಯ ಎಂಬವರ ಒಬ್ಬ ಮಗಳು ಸುಮಾರು ಒಂದು ತಿಂಗಳ ಹಿಂದೆ ಕಾಣೆಯಾಗಿದ್ದು, ಅವರನ್ನು ಅದೇ ಊರಿನ ಇಬ್ಬರು ಯುವಕರಾದ ಹಂಚನೂರು ಶ್ರೀನಿವಾಸ ಮತ್ತು ಕುಂದಕೇರಿ ರಾಜಶೇಖರ ಎಂಬವರು ಬೊಂಬಾಯಿಗೆ ಕರೆದೊಯ್ದಿರುವ ಗುಮಾನಿಯ ಮೇಲೆ ಇಲ್ಲಿನ ಪೋಲೀಸ್ ಠಾಣೆಗೆ ದೂರು ನೀಡಿದ್ದರು.

ಅವರನ್ನು ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ವಿಚಾರಣೆ ಮಾಡಿದ್ದರು. ಜಿಲ್ಲಾ ಪರಿಷತ್ ಸದಸ್ಯ ಬಿ. ಜಿ. ಚಿದಂಬರ್‌ರವರ ಜೊತೆಯಲ್ಲಿ ಠಾಣೆಗೆ ಬಂದ ಅವರು ತಾವುಗಳು ಅಂಥ ಯಾವುದನ್ನೂ ಮಾಡುತ್ತಿಲ್ಲವೆಂದೂ ದುರುದ್ದೇಶದಿಂದ ದೂರು ನೀಡಲಾಗಿರುವುದಾಗಿಯೂ ಹೇಳಿದ್ದರು. ಈ ಹುಡುಗಿಯರಲ್ಲೊಬ್ಬಳ ಅಣ್ಣನೊಬ್ಬನು ತನ್ನ ತಂಗಿ ಹೀಗೇ ಆಗಾಗ ಮಂಗಳೂರಿಗೆಂದು ಹೋಗಿಬರುತ್ತಿರುವುದಾಗಿಯೂ, ಅವಳನ್ನು ಮನೆಯಲ್ಲಿ ಯಾರೂ ಕೇಳುವುದಿಲ್ಲವೆಂದೂ ಹೇಳಿಕೆ ನೀಡಿದ್ದನು. (ಈತ ಸದರಿ ಶ್ರೀನಿವಾಸನ ಮನೆಯಲ್ಲಿ ಕೆಲಸಕ್ಕಿದ್ದಾನಂತೆ) ಬೇರೆ ಯಾವುದೇ ಸುಳಿವು-ಸಾಕ್ಷ್ಯಾಧಾರ ಇಲ್ಲದ್ದರಿಂದ ಹಾಗೂ, ಬಲಾತ್ಕಾರ ಅಥವಾ ಅಪಹರಣವಾಗಿರದೆ ಇಚ್ಛಾಪೂರ್ವಕವಾದ ನಡವಳಿಕೆಯಾಗಿದ್ದಲ್ಲಿ ಕಾನೂನು ಕ್ರಮಕ್ಕೆ ಅವಕಾಶವಿಲ್ಲದ್ದರಿಂದ ಪ್ರಕರಣವನ್ನು ಹಾಗೇ ಚುಕ್ತಾ ಮಾಡಿದುದಾಗಿ ದುರ್ಗಯ್ಯ ಹೇಳುತ್ತಾರೆ.

ಆದರೆ ಈಗ್ಗೆ ಎಂಟು ದಿನದಲ್ಲಿ ಅವಳ ಇನ್ನೊಬ್ಬಳು ತಂಗಿ ರತ್ನ ಎಂಬಾಕೆಯೂ ಕಾಣೆಯಾಗಿರುವುದಾಗಿಯೂ, ಆಕೆಯನ್ನು ಸಹ ಈ ಹಿಂದೆ ಆ ಯುವತಿಯರು ಕರೆದಿದ್ದರೆಂದೂ ಅವಳ ತಂದೆ ಹೇಳುತ್ತಾರೆ. **ಆದರೆ ಈ ಬಗ್ಗೆ ಅವರು ಪುನಃ ದೂರು ನೀಡಿಲ್ಲ.** ಮೊದಲಿನ ಇಬ್ಬರು ಯುವತಿಯರೊಂದಿಗೆ ಸದರಿ ಯುವಕರು ಅಂದು ಮುಂಡಗೋಡಿನಲ್ಲಿ ಬಸ್ ಹತ್ತಿದ್ದನ್ನೂ, ಬಿದರಗೋಡಿನಲ್ಲಿ ಅವರೊಂದಿಗೆ ಹೋಗುತ್ತಿದ್ದುದನ್ನೂ ನೋಡಿದವರಿದ್ದಾರೆಂದು ಅವರು ಹೇಳುತ್ತಾರೆ. **ಇದನ್ನೂ ಅವರು ಪೋಲೀಸರಿಗೆ ತಿಳಿಸಿಲ್ಲ.**

ಏ. 27ರಂದು ಈ ಇಬ್ಬರು ತಂದೆಗಳೂ ಪತ್ರಿಕಾ ಕಚೇರಿಗೆ ಬಂದು ಇದನ್ನೆಲ್ಲ ತಿಳಿಸಿದರು. ಆಗ ಠಾಣೆಯಲ್ಲಿ ಎಸ್ಸೈ ಇರಲಿಲ್ಲ. ಅವರು ಬಂದ ನಂತರ ಒಟ್ಟಿಗೇ ಠಾಣೆಗೆ ಹೋಗಿ ವಿಚಾರಿಸೋಣವೆಂದು ಠಾಣೆಯ ಹತ್ತಿರ ಇರಲು ಹೇಳಿ ಕಳಿಸಿದರೆ ಅನಂತರ ಅವರು ದೂರನ್ನೂ ನೀಡದೆ, ಪತ್ರಿಕೆಯ ಕಚೇರಿಗೂ ತಿಳಿಸದೆ ಹೊರಟುಹೋಗಿದ್ದಾರೆ.

ಇವರುಗಳ ಜೊತೆಗೆ ಉತ್ತಮೇಶ್ವರದ ಪುಡಾರಿಯೊಬ್ಬರು ಬಂದಿದ್ದರು: ಅವರ ದೃಷ್ಟಿಯಲ್ಲಿ "ಠಾಣೆಗೆ ಹೋಗಿ ಕೇಳುವ ಅಗತ್ಯವೇನಿಲ್ಲ" (ಬಹುಶಃ ಅವರು ಹೇಳಿದಂತೆ ನೇರವಾಗಿ ಪತ್ರಿಕೆಯಲ್ಲಿ ಪ್ರಕಟಿಸಬೇಕಿತ್ತು. ಜೊತೆಗೆ, ತಾನು ಅದನ್ನು ಖಂಡಿಸಿದ್ದೇನೆನ್ನುವ 'ಹೇಳಿಕೆ' ಪ್ರಕಟವಾಗಬೇಕಿತ್ತು!)

ಈ ಪ್ರಕರಣಗಳ ಬಗ್ಗೆ ಪತ್ರಿಕೆಗಳ ಬೆನ್ನು ಹತ್ತಿರುವ ದಯಂಬಳ್ಳಿಯ ಒಬ್ಬ 'ಗಣ್ಯ'ರಾಗಲಿ, ಈ ಪುಡಾರಿಯಾಗಲಿ, ಪೋಲೀಸರಿಗೆ ಕ್ರಮಬದ್ಧವಾಗಿ ದೂರು ಕೊಡಿಸಿ, ಅನಂತರ ಆ ಬಗ್ಗೆ ದೊರೆಯುವ ಸುಳಿವುಗಳನ್ನೆಲ್ಲ ಪೋಲೀಸರಿಗೆ ತಿಳಿಸುತ್ತ, ಪ್ರಕರಣದ ಬೆನ್ನು ಹತ್ತುವುದು ಸರಿಯಾದ ಮಾರ್ಗ. ಇಂಥ ಕ್ರಮಬದ್ಧವಾದ ಮಾರ್ಗೋಪಾಯಗಳಿಗೆ ಬದಲು ಪತ್ರಿಕೆಗಳನ್ನು ಒಳದಾರಿಯಾಗಿ ಬಳಸುವುದು ಆರೋಗ್ಯಕರ ಪ್ರವೃತ್ತಿಯಲ್ಲ.

ಆದ್ದರಿಂದ, ದಯಂಬಳ್ಳಿ ಅಥವಾ ಬೇರೆಲ್ಲೇ ಆಗಲಿ, **ಬಲಾತ್ಕಾರವಾಗಿ** ಯುವತಿಯರನ್ನು ಬೊಂಬಾಯಿಗೆ ಸಾಗಿಸುವುದು ನಡೆಯುತ್ತಿದೆಯಾದಲ್ಲಿ ಅದನ್ನು ತಡೆಗಟ್ಟಬೇಕೆಂಬ ವಾಸ್ತವಿಕವಾದ ಕಳಕಳಿ ಇರುವವರು ಮೇಲೆ ಹೇಳಿದಂತೆ ಕ್ರಮಬದ್ಧವಾದ ಮಾರ್ಗ ಅನುಸರಿಸಬೇಕು. **ಪತ್ರಿಕೆಗಳ ಪ್ರಯತ್ನ ಅಥವಾ ಪಾತ್ರ, ಏನಿದ್ದರೂ ಪೂರಕ ಮಾತ್ರ ಎಂಬುದನ್ನು ಅರಿಯಬೇಕು.**

## ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳಿಗೆ ಮೋಸ?

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

ಶೃಂಗೇರಿ: ದೇಶದಲ್ಲಿಯೇ ಪ್ರಪ್ರಥಮವಾದ ನೆಮ್ಮಾರಿನ ಹಂದಿ ಸಾಕಣೆ ಕೇಂದ್ರ (ಡ್ವಾಕ್ರಾ)ದ ವಹಿವಾಟಿನಲ್ಲಿ ಸುಮಾರು 10 ಸಾವಿರ ರೂ.ಗಳಿಗೂ ಮಿಕ್ಕಿದ ಅವ್ಯವಹಾರ ನಡೆದಿರುವ ಸುಳಿವು ಹೊರ ಬಿದ್ದಿದೆ. 9,000 ರೂ.ಗೂ ಮಿಕ್ಕಿದ ವೆಚ್ಚಗಳಿಗೆ ವೋಚರ್‌ಗಳಿಲ್ಲದಿರುವುದು, ಒಂದು ವೋಚರಿನಲ್ಲಿ 1000 ರೂ. ವ್ಯತ್ಯಾಸವಿರುವುದು ಮುಂತಾದ ವ್ಯತ್ಯಾಸಗಳು ಬೆಳಕಿಗೆ ಬಂದಿದ್ದು, ಹೆಚ್ಚಿನ ತನಿಖೆ ನಡೆಯುತ್ತಿದೆ. ಇದರ ಉಸ್ತುವಾರಿಕೆ ಶೃಂಗೇರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳದೂ, ವಹಿವಾಟು ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕಿನ ನೆಮ್ಮಾರು ಶಾಖೆಯದೂ ಆಗಿದ್ದು, ಮುಗ್ಧ ಫಲಾನುಭವಿಗಳಿಗೆ ದೊಡ್ಡ ಪ್ರಮಾಣದಲ್ಲಿ ಮೋಸವಾಗಿರುವ ಸಾಧ್ಯತೆಯಿದೆ.

ರಾಜ್ಯ ಮಟ್ಟದ ಕೆಸರುಗದ್ದೆ ಓಟ:

## ನಾಗೇಂದ್ರ, ಗೀತಾ ಪ್ರಥಮ

ಕೊಪ್ಪ: ಇಲ್ಲಿನ ಬಾಳಗಡಿಯಲ್ಲಿ ಏ. 27ರಂದು ನಡೆದ ರಾಜ್ಯ ಮಟ್ಟದ ಕೆಸರು ಗದ್ದೆ ಓಟದಲ್ಲಿ ತೀರ್ಥಹಳ್ಳಿಯ ನಾಗೇಂದ್ರ ಮತ್ತು ಚಿಕ್ಕಮಗಳೂರಿನ ಕೆ. ಕೆ. ಗೀತಾ ಪ್ರಥಮ ಸ್ಥಾನ ಪಡೆದರು.

ಚಿಕ್ಕಮಗಳೂರಿನ ಗೋಪಾಲ ಗೌಡ ಮತ್ತು ಕೆ.ಬಿ. ಶೈಲಾ ದ್ವಿತೀಯ ಸ್ಥಾನವನ್ನೂ, ಹಗ್ಗ ಎಳೆಯುವ ಸ್ಪರ್ಧೆಯಲ್ಲಿ ಬಾಳೆಹೊನ್ನೂರಿನ ಸ್ಟೀಫನ್ ತಂಡ ಪ್ರಥಮ ಹಾಗೂ ಬಾಳಗಡಿಯ ಜಾಯ್ಸ್ ತಂಡ ದ್ವಿತೀಯ ಸ್ಥಾನವನ್ನೂ ಗಳಿಸಿದರು.

### ಉತ್ಸಾಹ

ಬಾಳಗಡಿಯ ಸರ್ವೋದಯ ಯುವಕ ಸಂಘ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಆಶ್ರಯದಲ್ಲಿ ನಡೆದ ಈ ಸ್ಪರ್ಧೆಗಳು ಉತ್ಸಾಹ ಮತ್ತು ಕುತೂಹಲಕರವಾಗಿ ನಡೆದವು: ಕೆಸರುಗದ್ದೆ ಓಟದ ಸ್ಪರ್ಧೆಯಲ್ಲಿ 120 ಜನ ಹಾಗೂ ಹಗ್ಗ ಎಳೆಯುವ ಸ್ಪರ್ಧೆಯಲ್ಲಿ 8 ತಂಡಗಳವರು ಭಾಗವಹಿಸಿದ್ದರು.

### ಪಾರಿತೋಷಕ

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಶಿವಮೊಗ್ಗ ರೆಡ್‌ಕ್ರಾಸ್ ಸಂಸ್ಥೆ ಕಾರ್ಯದರ್ಶಿ ಎ. ಜಿ. ಭಾಸ್ಕರರಾವ್ ಅವರು, ತಮ್ಮ ವಿದ್ಯಾಭ್ಯಾಸ ಸಮಯದಲ್ಲಿ ಆಶ್ರಯ ನೀಡಿ ನೆರವಿತ್ತ, ತಮ್ಮ ಗುರುಗಳಾದ ಬಾಳಗಡಿ ದಿ॥ ಶ್ರೀನಿವಾಸರಾವ್ ಮತ್ತು ಅವರ ಪತ್ನಿಯ ಸ್ಮರಣಾರ್ಥ ಪರ್ಯಾಯ ಪಾರಿತೋಷಕ ನೀಡುವುದಾಗಿಯೂ, ಪ್ರತಿ ವರ್ಷ ಕ್ರೀಡೆ ತಗಲುವ ವೆಚ್ಚವನ್ನು ನೀಡುವುದಾಗಿಯೂ ಘೋಷಿಸಿದರು.

ಸ್ಪರ್ಧೆಗಳಲ್ಲಿ ಭಾಗವಹಿಸಿದ ಎಲ್ಲಾ ಸ್ಪರ್ಧಾಳುಗಳಿಗೂ, ತನು-ಮನ-ಧನ ಸಹಾಯ ನೀಡಿದ ಎಲ್ಲರಿಗೂ, ಹಾಗೂ ಈ ಸ್ಪರ್ಧೆಗಳು ಯಶಸ್ವಿಯಾಗಲು ಸಹಕರಿಸಿದ ಎಲ್ಲರಿಗೂ ಸರ್ವೋದಯ ಯುವಕ ಸಂಘ ಕೃತಜ್ಞತೆಯನ್ನು ಸಲ್ಲಿಸಿದೆ.

## ಅಂಗನವಾಡಿ ಕೇಂದ್ರಗಳ ಮುಚ್ಚುವಿಕೆಗೆ ವಿರೋಧ

ಕೊಪ್ಪ: ತಾಲ್ಲೂಕಿನಲ್ಲಿ ಹಲವಾರು ಅಂಗನವಾಡಿ ಕೇಂದ್ರಗಳನ್ನು ಮುಚ್ಚಲು ಯೋಚಿಸಲಾಗಿದೆ ಎಂಬ ವರದಿಗಳನ್ನಾಧರಿಸಿ, ಈ ಕ್ರಮವನ್ನು ಕೊಪ್ಪ ತಾ॥ ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕರ ಸಂಘ ತೀವ್ರವಾಗಿ ಖಂಡಿಸಿ, ಈ ಬಗ್ಗೆ ಮೇ 13ರಂದು ಬಾಲವಿಕಾಸ ಯೋಜನಾಧಿಕಾರಿಗಳ ಕಚೇರಿಯೆದುರು ಧರಣಿ ನಡೆಸಲು ನಿರ್ಧರಿಸಿದೆ.

ಸರ್ಕಾರಿ ಶಾಲೆಗಳಂತೆ ಅಂಗನವಾಡಿ ಮಕ್ಕಳಿಗೂ ಉಚಿತ ಸಮವಸ್ತ್ರಗಳನ್ನು ನೀಡಬೇಕು ಹಾಗೂ ಅಂಗನವಾಡಿ ಉದ್ಯೋಗಿಗಳ ಸೌಲಭ್ಯಗಳನ್ನು ಹೆಚ್ಚಿಸಬೇಕೆಂದು ಸಂಘವು ಸರ್ಕಾರವನ್ನು ಒತ್ತಾಯಿಸಿದೆ.

ಸರ್ಕಾರ ಅಂಗನವಾಡಿ ಮುಚ್ಚುವ ಪ್ರಯತ್ನ ಮಾಡಿದಲ್ಲಿ ತೀವ್ರವಾದ ಚಳವಳಿ ನಡೆಸಲೂ ತೀರ್ಮಾನಿಸಿದೆ.

## ಕಡಬಗೆರೆ ಮಹಿಳೆ ಕೊಲೆ: ಆರೋಪಿ ವಿಲಿಯಂ ಬಂಧನ

ಬಾಳೆಹೊನ್ನೂರು: ಇಲ್ಲಿಗೆ ಸಮೀಪದ ಕಡಬಗೆರೆಯಲ್ಲಿ ಏ. 1ರಂದು ದೇವಮ್ಮ ಎಂಬ ಮಹಿಳೆಯನ್ನು ಕೊಲೆ ಮಾಡಿ ಆಕೆಯ ಕೊರಳಲ್ಲಿದ್ದ ಬಂಗಾರದ 17 ಗುಂಡುಗಳನ್ನು ಕದ್ದೊಯ್ದಿದ್ದ ಅದೇ ಗ್ರಾಮದ ವಿಲಿಯಂ ಎಂಬಾತನನ್ನು ಪೋಲೀಸರು ಬೊಂಬಾಯಿಯಲ್ಲಿ ಮಾಲು ಸಮೇತ ಬಂಧಿಸಿದ್ದಾರೆ. ಸರ್ಕಲ್ ಇನ್‌ಸ್ಪೆಕ್ಟರ್ ಕೇಶವ ನಂದ್ ತನಿಖೆ ನಡೆಸಿದ್ದು, ನ. ರಾ. ಪು. ಎಸ್ಸೈ ಭಂಡಾರಿ ಆರೋಪಿಯನ್ನು ಬಂಧಿಸಿದರು. ಇವರಿಬ್ಬರ ಕಾರ್ಯವನ್ನು ಎ... ಶ್ಲಾಘಿಸಿದ್ದಾರೆ.

# ಜಾದೂಗಾರ v/s ಮಂತ್ರವಾದಿ

**ಮಾಟ-ಮಂತ್ರಗಳು, ತೀರ್ಥ-ವಿಭೂತಿಗಳು, ದೈವೀ ಶಕ್ತಿಗಳು— ಇಂಥವುಗಳಿಂದ ಜನಸಾಮಾನ್ಯರ ಸಮಸ್ಯೆ ಮತ್ತು ರೋಗಗಳಿಗೆ 'ಪರಿಹಾರ' ದೊರಕಿಸುತ್ತೇವೆನ್ನುವ 'ವಿಭೂತಿ ಪುರುಷ'ರು ವಿದೇಶಗಳಲ್ಲಿ ಸಹ ಚಲಾವಣೆಯಲ್ಲಿದ್ದಾರಂತೆ. ಭಾರತ ಸಂಜಾತರಾಗಿ ಶ್ರೀಲಂಕಾದಲ್ಲಿ ನೆಲೆಸಿದ್ದ ದಿ|| ಡಾ. ಅಬ್ರಹಾಂ ಕೋವೂರ್ ಇಂಥ 'ದೈವೀ ವ್ಯಕ್ತಿ'ಗಳ ಕೈ ಚಳಕ-ಬಾಯ್ ಚಳಕಗಳನ್ನು ಬಯಲು ಮಾಡುತ್ತ, ಜನರಲ್ಲಿ ಪ್ರಜ್ಞೆ ಮೂಡಿಸಲು ಶ್ರಮಿಸುತ್ತಲೇ ಕೊನೆಯುಸಿರೆಳೆದರು.**

**ವಿಶ್ವವಿಖ್ಯಾತ ಐಂದ್ರಜಾಲಿಕ ಜೇಮ್ಸ್ ರ್ಯಾಂಡಿ ಇಂಥದೇ ಧ್ಯೇಯಕ್ಕಾಗಿ ದುಡಿಯುತ್ತಿರುವ ಮತ್ತೊಬ್ಬ ಅಗ್ರಗಣ್ಯರು.**

ದ ಅತ್ಯಂತ ಪ್ರತಿಭಾವಂತ ವ್ಯಕ್ತಿ
ಡಲಾಗುವ 25 ಲಕ್ಷ ರೂ. ಮೊ
ಕ್ ಆರ್ಥರ್ ಅನುದಾನವನ್ನು
ಪಡೆದವರ ಪೈಕಿ ಒಬ್ಬ ಜಾದೂ
ಸೇರಿದ್ದಾನೆ. ಆತನ ಹೆಸರು
ರ್ಯಾಂಡಿ. ಆತನ ಕಸಬು–ಮಾಟ
ಹೆಸರಿನಲ್ಲಿ ಮುಗ್ಧ ಜನರನ್ನು
ುವ ದೈವೀ ಮಾನವರ ಕುಟಿಲ ತಂ
ಲ್ಲ ಬಯಲಿಗೆಳೆಯುವುದು.
ದ್ಭುತ ರ್ಯಾಂಡಿ' ಎಂದೇ ಜನಪ್ರಿ
ಪರಿಚಿತನಾಗಿರುವ 57 ವಯಸ್ಸಿನ
ವಿಶ್ವದ ಖ್ಯಾತ ಐಂದ್ರಜಾಲಿಕ
. ಆದರೆ ಕೇವಲ ಮನರಂಜನೆಗೆ
ವಿದ್ಯೆ ಪ್ರದರ್ಶಿಸುವ ಬದಲು ಆತ
ಹಲವು ವರ್ಷಗಳಿಂದ 'ದೇವಾಂಶ
ರೆಂದು ಹೇಳಿಕೊಳ್ಳುವ ಬಾಬಾಗಳ
ಮರ ಸಾರಿದ್ದಾನೆ.
ಲ್ಲಿರುವಂತೆ ಪಾಶ್ಚಾತ್ಯ ದೇಶ
ಮಂಕು ಬೂದಿ, ತೀರ್ಥ-ಪ್ರಸಾದ
ರೋಗ ವಾಸಿ ಮಾಡುವ ಕಪಟ
ಸಂಖ್ಯೆ ಸಾಕಷ್ಟು ಹೆಚ್ಚಿದೆ. ವ್ಯ
ನೆಂದರೆ, ಅಲ್ಲಿಯ ಢೋಂಗಿ ಪಂಡಿ
ಧುನಿಕ ವಿಜ್ಞಾನ– ತಂತ್ರಜ್ಞಾನದ
ದಿಂದಲೇ ತಮ್ಮ 'ದೈವೀ ಶಕ್ತಿ'
ದರ್ಶನ ಮಾಡುತ್ತಾರೆ. ಕಂಪ್ಯೂ
ಹಾಯದಿಂದ ಭಕ್ತವೃಂದದ ಖಾ
ಹಿತಿ (ಹೆಸರು, ಚರಿತ್ರೆ, ರೋಗ,
ಸ್ತಿ, ಸಮಸ್ಯೆ ಇತ್ಯಾದಿ) ಸಂಗ್ರ
ಳ್ಳುತ್ತಾರೆ. ಕಿವಿಯಲ್ಲಿ ಅತಿಸೂಕ್ಷ್ಮ

ರೇಡಿಯೋ ರಿಸೀವರ್ ಇಟ್ಟುಕೊಂಡು, ಜನರ ಮಧ್ಯೆ ಓಡಾಡುತ್ತ ಅವರ ಸಮಸ್ಯೆಗಳನ್ನು ಮುಂಚಿತವಾಗಿಯೇ ಗುರುತಿಸಿ 'ಉಪದೇಶ' ನೀಡುತ್ತಾರೆ ಪೀಟರ್ ಪೊಪಾಫ್ ಎಂಬ ಖ್ಯಾತ 'ದೈವೀಶಕ್ತಿ'ಯ ವ್ಯಕ್ತಿಯ ರಹಸ್ಯವನ್ನು ರ್ಯಾಂಡಿ ಬಹಿರಂಗಗೊಳಿಸಿದ್ದ. ಇಂಥ ಢೋಂಗಿ ವ್ಯಕ್ತಿಗಳ ಉಪದೇಶಕ್ಕೆ ಮರುಳಾಗಿ ಭಕ್ತವೃಂದ ಅಮೂಲ್ಯ ಔಷಧಗಳನ್ನು ಕಸದ ಬುಟ್ಟಿಗೆ ಬಿಸಾಕಿ, ತೀರ್ಥ ಕುಡಿದು ರೋಗ ಉಲ್ಬಣ ಮಾಡಿಕೊಂಡಿದ್ದನ್ನೂ ರ್ಯಾಂಡಿ ಟಿಲಿವಿಷನ್ ಪ್ರದರ್ಶನಗಳಲ್ಲಿ ವಿವರಿಸಿದ.

ಭಾರತದಲ್ಲೂ ಜಾದೂಗಾರರ ಹಾಗೂ ಬಾಬಾಗಳ ಮಧ್ಯೆ ಅಗೋಚರ ಘರ್ಷಣೆ ಇದ್ದೇ ಇದೆ. ಬಂಗಾಲದ ಪಿ.ಸಿ. ಸರ್ಕಾರ್ (ಜ್ಯೂನಿಯರ್) ಖುದ್ದಾಗಿ ಸಾಯಿಬಾಬಾಗೇ ಖಾಲಿ ಕೈಯಲ್ಲಿ ರಸಗುಲ್ಲಾ ಸೃಷ್ಟಿಮಾಡಿ ನೀಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಕೇವಲ ವೃತ್ತಿ ಮಾತ್ಸರ್ಯ ಅಥವಾ ಸ್ಪೈರ್ಧೆಯದೃಷ್ಟಿಯಿಂದ ಬಾಬಾಗಳನ್ನು ಬಯಲಿಗೆಳೆದರೆ ಸಾಲದು. ಮುಗ್ಧ ಜನಕ್ಕೆ ಶಿಕ್ಷಣ ನೀಡುವುದೂ ಅದರ ಉದ್ದೇಶವಾಗಿರಬೇಕು ಎಂಬುದನ್ನು ಕೇರಳ ಶಾಸ್ತ್ರ (ವಿಜ್ಞಾನ) ಪರಿಷತ್ ತೋರಿಸಿಕೊಟ್ಟಿದೆ. ಅಲ್ಲಿನ ಪರಮಾನಂದ್ ಎಂಬವರು, ಇದಕ್ಕೆಂದೇ ಜಾದೂ ಕಲಿತು, **ಸಾಯಿಬಾಬಾ ಮಾಡುವ ಎಲ್ಲಾ ಮಾಟಗಳನ್ನೂ ಬಹಿರಂಗವಾಗಿ ಮಾಡಿ ತೋರಿಸುತ್ತಾರೆ.** ಬಸವನಗುಡಿ ನ್ಯಾಷನಲ್ ಕಾಲೇಜಿನ ವಿಜ್ಞಾನ ವೇದಿಕೆಯಲ್ಲಿ ಅವರು ನೀಡಿದ ಪ್ರದರ್ಶನ ಅನೇಕರನ್ನು ಮೂಕವಿಸ್ಮಿತರನ್ನಾಗ ಮಾಡಿದೆ. ವಾಚು, ಬೂದಿ, ತಾಯಿತಗಳನ್ನು ಶೂನ್ಯದಲ್ಲಿ ಸೃಷ್ಟಿಮಾಡುವ ತಂತ್ರಗಳನ್ನು ಅವರು ಪುಕ್ಕಟೆ ವಿವರಿಸುತ್ತಾರೆ. ಅದೂ ಒಂದು ಸಮಾಜಕಲ್ಯಾಣದ ಸಾಧನೆ ಎಂಬುದನ್ನು ಗುರುತಿಸಿ ಪ್ರೋತ್ಸಾಹಿಸುವ ಮನೋಭಾವ ನಮ್ಮ ವಿಜ್ಞಾನರಂಗದಲ್ಲಿ ಮೂಡಿದಾಗ ಪ್ರಾಯಶಃ ನಮ್ಮಲ್ಲೂ ಪ್ರತಿಭೆಗಳು ಬೆಳಕಿಗೆ ಬರಬಹುದು.

ಅಮೋನಿಯಮ್ ಅಕ್ಸಲೇಟ್, ಟಾರ್ಟರಿಕ್ ಆ್ಯಸಿಡ್‌ನಂಥ ರಸಾಯನ ಬಳಿದರೆ ಯಾವ ಫೋಟೋದಿಂದಾದರೂ ಬೂದಿ ಉದುರಿಸಬಹುದೆಂದು ಈಗ ಕಾಲೇಜು ವಿದ್ಯಾರ್ಥಿಗಳಿಗೂ ಗೊತ್ತಾಗಿದೆ. ನಿಕೆಲ್–ಟೈಟಾನಿಯಮ್‌ನ ಮಿಶ್ರಲೋಹವಾದ 'ನಿಟಿನಾಲ್'ನಲ್ಲಿ ಜ್ಞಾಪಕಶಕ್ತಿ ಇರುತ್ತದೆಂಬ ರಹಸ್ಯ ಮಾತ್ರ ಈಗಲೂ ಜಾದೂಗಾರರಿಗೆ ಮತ್ತು ಪ್ರಾಯಶಃ ಮಂತ್ರವಾದಿಗಳಿಗಷ್ಟೇ ಗೊತ್ತು. ಲೋಹ ವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಅದು ಇನ್ನೂ ಪ್ರಸ್ತಾಪ ಆಗಿಲ್ಲ. ಈ ಮಿಶ್ರ ಲೋಹವನ್ನೆ ಬಳಸಿ ಖ್ಯಾತ ಜಾದೂಗಾರ ಯೂರಿ ಗೆಲ್ಲರ್, 'ಮನೋಬಲ'ದಿಂದ ಎಂದು ಹೇಳಿಕೊಂಡು ಚಮಚ, ತಂತಿಗಳನ್ನು ಡೊಂಕು ಮಾಡುತ್ತಿದ್ದನೆಂದು ಇನ್ನೊಬ್ಬ ಖ್ಯಾತ ಜಾದೂಗಾರ ಹಾಗೂ ವಿಜ್ಞಾನ ಲೇಖಕ ಡಾ. ಮಾರ್ಟಿನ್ ಗಾರ್ಡನರ್ ವಿವರಿಸಿದ್ದಾನೆ.

ರ್ಯಾಂಡಿಗೆ ನೀಡಲಾದ ಮೆಕ್ ಆರ್ಥರ್ ಅನುದಾನ ನಾಲ್ಕು ವರ್ಷಗಳ ಹಿಂದೆ ಕರ್ನಾಟಕದ ಕವಿ ಎ.ಕೆ. ರಾಮಾನುಜನ್ ಅವರಿಗೂ ಲಭಿಸಿದೆ ಐದು ವರ್ಷಗಳ ಅವಧಿಯಲ್ಲಿ ಈ ಮೊತ್ತವನ್ನು ಅವರು ತಮಗಿಷ್ಟ ಬಂದಂತೆ ವ್ಯಯಿಸಬಹುದು. ರ್ಯಾಂಡಿ ಈ ಹಣದಲ್ಲಿ ಕಂಪ್ಯೂಟರ್ ಕೊಳ್ಳಲು ನಿರ್ಧರಿಸಿದ್ದು ಮಾಯಾವಿಗಳ ವಿಶ್ವ ಮಾಹಿತಿ ಕೋಶವೊಂದು ರೂಪುಗೊಳ್ಳಲಿದೆ. ಅದರಲ್ಲಿ ಎಷ್ಟುಮಂದಿ ಭಾರತೀಯ ಖ್ಯಾತನಾಮರ ಹೆಸರು ಸೇರ್ಪಡೆಯಾಗುತ್ತೋ ನೋಡಬೇಕು !

(ಸೌಜನ್ಯ : 'ಪ್ರಜಾವಾಣಿ')

## ಚಿನ್ನಾರಿ ಕೂಟ

### ಜಾಣ ಪ್ರಶ್ನೆಗಳು

ಭೂಮಿಗಿಂತ ಘನವಾದುದು ಯಾ

ಗಾಳಿಗಿಂತ ವೇಗವುಳ್ಳದ್ದು ಯಾ

ದೇಶಾಂತರಕ್ಕೆ ಹೋದವನಿಗೆ
ಯಾರು?
ಎಂಥ ಕಷ್ಟದಲ್ಲೂ ಮನುಷ್ಯನಿಗೆ
ುಕವಾಗುವುದು ಯಾವುದು?
ಭಾರತದ ಬೆನ್ನೆಲುಬು ಯಾರು?
ಪ್ರಪಂಚದಲ್ಲಿ ಇಲ್ಲದಿರುವ 3
ಗಳು ಯಾವುವು?
ಮಾನವರಲ್ಲಿ ಎಷ್ಟು ಜಾತಿ? ಯಾ
(ಉತ್ತರ ಮುಂದಿನ ಬಾರಿ)
ಸಂಗ್ರಹ: **ಡಿ.ಟಿ. ಅಶೋಕ್.**
ಣ ಮಕ್ಕಳೆ, ಈ ಜಾಣ ಪ್ರಶ್ನೆಗಳಿಗೆ
ರಗಳನ್ನು ಬರೆದು 'ಚಿನ್ನಾರಿ ಕೂಟ'
ಸಿ. ಅತಿ ಹೆಚ್ಚು ಸರಿ ಉತ್ತರ ಕಳಿ
ಗೆ ಬಹುಮಾನವಿದೆ. ಯಾರಾದರೂ
ಸರಿಯುತ್ತರ ಕಳಿಸಿದರೆ ಅವರಿಗೆ
ರ್ ಬಹುಮಾನ! (ಅದಕ್ಕಾಗಿ ನಿಮ್ಮ
–ತಾಯಿ ಅಥವಾ ಹಿರಿಯರಿಂದ ಹೇ
ಳ್ಳಬಾರದು, ಹಾಂ?)
ತ್ತರಗಳು ನಮಗೆ 15–5–87ರೊಳ
ುಪಬೇಕು. ನೀವೂ ಇಂಥದೇ ಜಾಣ
ಗಳನ್ನು ಹುಡುಕಿ ಸಂಗ್ರಹಿಸಿ, ಉ
ಸಮೇತ ಕಳಿಸಬಹುದು. ಪ್ರಯತ್ನಿಸಿ.
**—ಸಂಪಾದಕ.]**

### ಏಕಬುದ್ಧಿ - ಸಹಸ್ರಬುದ್ಧಿ

ಕಾಡಿನ ಬದಿಯಲ್ಲಿ ಒಂದು ಕೊಳವಿತ್ತು. ಅದರಲ್ಲಿ ಮೀನು, ಕಪ್ಪೆ, ಏಡಿ ಮುಂತಾದ ಜಲಚರಗಳೆಲ್ಲ ವಾಸವಾಗಿದ್ದವು. ಅವುಗಳಲ್ಲಿ ಸಹಸ್ರಬುದ್ಧಿ ಮತ್ತು ಶತಬುದ್ಧಿ ಎಂಬ ಎರಡು ದೊಡ್ಡ ಮೀನುಗಳು, ಏಕಬುದ್ಧಿ ಎಂಬ ಕಪ್ಪೆ ಮತ್ತು ಅದರ ಹೆಂಡತಿ ತುಂಬ ಸ್ನೇಹದಿಂದಿದ್ದವು.

ಒಮ್ಮೆ ಆ ದಾರಿಯಾಗಿ ಇಬ್ಬರು ಮೀನುಗಾರರು ಹೋಗುತ್ತಿದ್ದರು. ಈ ಎರಡು ದೊಡ್ಡ ಮೀನುಗಳು ಅವರ ಕಣ್ಣಿಗೆ ಬಿದ್ದವು. ಅವರಲ್ಲೊಬ್ಬ ಕೂಡಲೇ ಅವುಗಳನ್ನು ಹಿಡಿಯೋಣವೆಂದ. ಅದಕ್ಕೆ ಇನ್ನೊಬ್ಬ ಹೇಳಿದ–

"ತಾಳು, ಅವಸರ ಮಾಡಬೇಡ, ಇನ್ನೂ ತುಂಬ ಮೀನುಗಳಿರಬಹುದು. ನಾಳೆಯ ದಿನ ನಮ್ಮ ಬಲೆಯನ್ನು ತಂದು ಅವುಗಳನ್ನು ಹಿಡಿಯೋಣ"

ಅಂತೆಯೇ ಅವರಿಬ್ಬರೂ ಹೊರಟು ಹೋದರು.

ಏಕಬುದ್ಧಿ ತನ್ನ ಗೆಳೆಯರಿಗೆ "ಅವರು ಮಾತಾಡಿಕೊಂಡಿದ್ದನ್ನು ಕೇಳಿದಿರಾ? ನಾಳೆ ಅವರು ಬರುವುದರೊಳಗಾಗಿ ನಾವು ಬೇರೊಂದು ಸುರಕ್ಷಿತವಾದ ಸ್ಥಳಕ್ಕೆ ಹೊರಟು ಹೋಗಿ ಬಿಡೋಣ" ಎಂದಿತು.

ಅದಕ್ಕೆ ಸಹಸ್ರ ಬುದ್ಧಿ ಹೇಳಿತು–"ಏನು ಮಾತು ಗೆಳೆಯ? ನಾಳೆ ಅವರು ಬಂದರಲ್ಲವೆ? ಅವರು ಬಾರದೆಯೂ ಇರಬಹುದು"

ಏಕಬುದ್ಧಿ ಹೇಳಿತು– "ಅವರು ಬಾರದಿದ್ದರೆ ಒಳ್ಳೆಯದೇ. ಆದರೆ ಆಕಸ್ಮಾತ್ ಅವರು ಬಂದೇ ಬಿಟ್ಟರೆ ಮತ್ತೆ ನಾವು ಅಪಾಯದಿಂದ ಪಾರಾಗಲು ಆಗುವುದಿಲ್ಲವಲ್ಲ".

"ಓಹೋ, ಹಾಗೊಂದು ವೇಳೆ ಅವರು ಬಂದರೂ ನನ್ನ ಬಳಿ ಸಹಸ್ರ ಉಪಾಯಗಳಿವೆ. ನಾವು ಸುಲಭವಾಗಿ ಪಾರಾಗಬಹುದು"

ಶತಬುದ್ಧಿಯೂ ಧ್ವನಿಗೂಡಿಸಿತು– "ಹೌದು ಗೆಳೆಯ. ಅವರು ಬಂದಾರೆಂಬ ಭಯಕ್ಕೆ ನಾವು ಇಷ್ಟು ವರ್ಷಗಳಿಂದ ವಾಸವಿರುವ ಈ ಸ್ಥಳವನ್ನು ಬಿಡಬೇಕೆ? ಗೆಳೆಯನ ಸಹಸ್ರ ಉಪಾಯಗಳಲ್ಲದೆ ನನ್ನವೂ ನೂರು ಉಪಾಯಗಳಿವೆ. ಏನೂ ಭಯಪಡಬೇಡ. ಇಲ್ಲೇ ಹಾಯಾಗಿರೋಣ."

ಆದರೆ ಏಕಬುದ್ಧಿಗೆ ಈ ವಿಚಾರ ಸರಿ ಬರಲಿಲ್ಲ. ಅದು ಹೇಳಿತು — "ಇಲ್ಲ ಗೆಳೆಯರೆ. ಅವರು ಬಂದು ಬಲೆ ಬೀಸಿದ ಮೇಲೆ ತಪ್ಪಿಸಿಕೊಳ್ಳಲು ಪರದಾಡುವುದಕ್ಕಿಂತ ಈಗಲೇ ತಪ್ಪಿಸಿಕೊಳ್ಳುವುದು ಮೇಲು. ನಾನಂತೂ ನನ್ನ ಹೆಂಡತಿಯೊಂದಿಗೆ ನನಗೆ ಗೊತ್ತಿರುವ ಒಂದು ಸುರಕ್ಷಿತ ಸ್ಥಳಕ್ಕೆ ಹೋಗುತ್ತಿದ್ದೇನೆ."

ಇಷ್ಟು ಹೇಳಿ ಏಕಬುದ್ಧಿ ತನ್ನ ಹೆಂಡತಿಯೊಂದಿಗೆ ಆ ಕೊಳದಿಂದ ಹೊರಟು ಬಿಟ್ಟಿತು.

ಮರುದಿನ ಮೀನುಗಾರರು ಬಲೆಯೊಂದಿಗೆ ಬಂದೇ ಬಿಟ್ಟರು. ಅವರು ಕೊಳದಲ್ಲಿ ಬಲೆ ಬೀಸಿದಾಗ ಬೇರೆ ಜಲಚರಗಳ ಜೊತೆಗೆ ಸಹಸ್ರಬುದ್ಧಿ, ಶತಬುದ್ಧಿಗಳೂ ಅದರಲ್ಲಿ ಸಿಕ್ಕಿಹಾಕಿಕೊಂಡವು. ಎಷ್ಟು ಹೆಣಗಾಡಿದರೂ ತಪ್ಪಿಸಿಕೊಳ್ಳಲು ಆಗಲಿಲ್ಲ.

"ಅಯ್ಯೋ, ಈ ಬಲೆ ಬಹಳ ಗಟ್ಟಿಯಾಗಿದೆ. ನಾವು ಕೆಟ್ಟೆವು. ಒಮ್ಮೆ ಹೇಗಾದರೂ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿದ್ದರೆ ಏನಾದರೂ ಉಪಾಯ ಯೋಚಿಸಬಹುದಿತ್ತು...."

ಹೀಗೆಂದು ಅವು ಯೋಚಿಸುತ್ತಿರುವಷ್ಟರಲ್ಲೇ ಮೀನುಗಾರರು ಬಲೆಯನ್ನು ಹೊರಗೆಳೆದು ಹಾಕಿದರು. ಎಲ್ಲ ಮೀನು–ಏಡಿಗಳ ಜೊತೆಗೇ ಈ ಎರಡು 'ಬುದ್ಧಿವಂತ' ಮೀನುಗಳೂ ಒದ್ದಾಡಿ ಸತ್ತವು. ಮೀನುಗಾರರು ಬಹಳ ಸಂತೋಷದಿಂದ ಅವನ್ನೆಲ್ಲ ಹೊತ್ತುಕೊಂಡು ನಡೆದರು.

ಮರೆಯಲ್ಲಿ ಕುಳಿತು ಇದನ್ನೆಲ್ಲ ನೋಡುತ್ತಿದ್ದ ಏಕಬುದ್ಧಿ ತನ್ನ ಹೆಂಡತಿಯನ್ನು ಕುರಿತು, "ನೋಡಿದೆಯಾ? ಎಷ್ಟು ಬುದ್ಧಿವಂತರಾದರೇನು? ನನ್ನ ಒಂದು ಬುದ್ಧಿ ಮಾತನ್ನು ಅವರು ಸ್ವಲ್ಪ ಯೋಚಿಸಿದ್ದರೆ ಅವರೂ ಪಾರಾಗಬಹುದಿತ್ತಲ್ಲ!" ಎಂದು ಬಹಳ ದುಃಖದಿಂದ ಹೇಳಿತು. (ಸಂಗ್ರಹ)

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114

5ನೇ ವರ್ಷ 32ನೇ ಸಂಚಿಕೆ ಕೊಪ್ಪ 3-5-1987 ಭಾನುವಾರ ಬೆಲೆ 50 ಪೈಸೆ




ದಯಂಬಳ್ಳಿ ಸುತ್ತಮುತ್ತ ಹುಡುಗಿಯರ ಸಾಗಾಟದ ಗುಲ್ಲು:

## ನಿಜ ಸಂಗತಿ ಬಯಲಾಗುವುದೆ?

ಕೊಪ್ಪ: ಈ ತಾಲ್ಲೂಕಿನ ದಯಂಬಳ್ಳಿ ಗ್ರಾಮದಿಂದ ಮೂವರು ಹರಿಜನ ಯುವತಿಯರು ಕಾಣೆಯಾಗಿದ್ದಾರೆನ್ನಲಾಗಿದ್ದು, ಅವರನ್ನು ಬೊಂಬಾಯಿಗೆ ಕರೆದೊಯ್ಯಲಾಗಿದೆಯೆಂಬ ಗುಮಾನಿಯನ್ನು ಅವರ ತಂದೆ-ತಾಯಿಗಳು ವ್ಯಕ್ತಪಡಿಸುತ್ತಿದ್ದಾರೆ.

ಅಲ್ಲಿನ ಶೇಷಯ್ಯ ಎಂಬವರ ಒಬ್ಬ ಮಗಳು ಮತ್ತು ಕೆಂಚಯ್ಯ ಎಂಬವರ ಒಬ್ಬ ಮಗಳು ಸುಮಾರು ಒಂದು ತಿಂಗಳ ಹಿಂದೆ ಕಾಣೆಯಾಗಿದ್ದು, ಅವರನ್ನು ಅದೇ ಊರಿನ ಇಬ್ಬರು ಯುವಕರಾದ ಹಂಚನೂರು ಶ್ರೀನಿವಾಸ ಮತ್ತು ಕುಂದಕೇರಿ ರಾಜಶೇಖರ ಎಂಬವರು ಬೊಂಬಾಯಿಗೆ ಕರೆದೊಯ್ದಿರುವ ಗುಮಾನಿಯ ಮೇಲೆ ಇಲ್ಲಿನ ಪೋಲೀಸ್ ಠಾಣೆಗೆ ದೂರು ನೀಡಿದ್ದರು.

ಅವರನ್ನು ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ವಿಚಾರಣೆ ಮಾಡಿದ್ದರು. ಜಿಲ್ಲಾ ಪರಿಷತ್ ಸದಸ್ಯ ಬಿ. ಜಿ. ಚಿದಂಬರ್‌ರವರ ಜೊತೆಯಲ್ಲಿ ಠಾಣೆಗೆ ಬಂದ ಅವರು ತಾವುಗಳು ಅಂಥ ಯಾವುದನ್ನೂ ಮಾಡುತ್ತಿಲ್ಲವೆಂದೂ ದುರುದ್ದೇಶದಿಂದ ದೂರು ನೀಡಲಾಗಿರುವುದಾಗಿಯೂ ಹೇಳಿದ್ದರು. ಈ ಹುಡುಗಿಯರಲ್ಲೊಬ್ಬಳ ಅಣ್ಣನೊಬ್ಬನು ತನ್ನ ತಂಗಿ ಹೀಗೇ ಆಗಾಗ ಮಂಗಳೂರಿಗೆಂದು ಹೋಗಿಬರುತ್ತಿರುವುದಾಗಿಯೂ, ಅವಳನ್ನು ಮನೆಯಲ್ಲಿ ಯಾರೂ ಕೇಳುವುದಿಲ್ಲವೆಂದೂ ಹೇಳಿಕೆ ನೀಡಿದ್ದನು. (ಈತ ಸದರಿ ಶ್ರೀನಿವಾಸನ ಮನೆಯಲ್ಲಿ ಕೆಲಸಕ್ಕಿದ್ದಾನಂತೆ) ಬೇರೆ ಯಾವುದೇ ಸುಳಿವು-ಸಾಕ್ಷ್ಯಾಧಾರ ಇಲ್ಲದ್ದರಿಂದ ಹಾಗೂ, ಬಲಾತ್ಕಾರ ಅಥವಾ ಅಪಹರಣವಾಗಿರದೆ ಇಚ್ಛಾಪೂರ್ವಕವಾದ ನಡವಳಿಕೆಯಾಗಿದ್ದಲ್ಲಿ ಕಾನೂನು ಕ್ರಮಕ್ಕೆ ಅವಕಾಶವಿಲ್ಲದ್ದರಿಂದ ಪ್ರಕರಣವನ್ನು ಹಾಗೇ ಚುಕ್ತಾ ಮಾಡಿದುದಾಗಿ ದುರ್ಗಯ್ಯ ಹೇಳುತ್ತಾರೆ.

ಆದರೆ ಈಗ್ಗೆ ಎಂಟು ದಿನದಲ್ಲಿ ಅವಳ ಇನ್ನೊಬ್ಬಳು ತಂಗಿ ರತ್ನ ಎಂಬಾಕೆಯೂ ಕಾಣೆಯಾಗಿರುವುದಾಗಿಯೂ, ಆಕೆಯನ್ನು ಸಹ ಈ ಹಿಂದೆ ಆ ಯುವತಿಯರು ಕರೆದಿದ್ದರೆಂದೂ ಅವಳ ತಂದೆ ಹೇಳುತ್ತಾರೆ. ಆದರೆ **ಈ ಬಗ್ಗೆ ಅವರು ಪುನಃ ದೂರು ನೀಡಿಲ್ಲ.** ಮೊದಲಿನ ಇಬ್ಬರು ಯುವತಿಯರೊಂದಿಗೆ ಸದರಿ ಯುವಕರು ಅಂದು ಮುಂಡಗೋಡಿನಲ್ಲಿ ಬಸ್ ಹತ್ತಿದ್ದನ್ನೂ, ಬಿದರಗೋಡಿನಲ್ಲಿ ಅವರೊಂದಿಗೆ ಹೋಗುತ್ತಿದ್ದುದನ್ನೂ ನೋಡಿದವರಿದ್ದಾರೆಂದು ಅವರು ಹೇಳುತ್ತಾರೆ. **ಇದನ್ನೂ ಅವರು ಪೋಲೀಸರಿಗೆ ತಿಳಿಸಿಲ್ಲ.**

ಏ. 27ರಂದು ಈ ಇಬ್ಬರು ತಂದೆಗಳೂ ಪತ್ರಿಕಾ ಕಚೇರಿಗೆ ಬಂದು ಇದನ್ನೆಲ್ಲ ತಿಳಿಸಿದರು. ಆಗ ಠಾಣೆಯಲ್ಲಿ ಎಸ್ಸೈ ಇರಲಿಲ್ಲ. ಅವರು ಬಂದ ನಂತರ ಒಟ್ಟಿಗೇ ಠಾಣೆಗೆ ಹೋಗಿ ವಿಚಾರಿಸೋಣವೆಂದು ಠಾಣೆಯ ಹತ್ತಿರ ಇರಲು ಹೇಳಿ ಕಳಿಸಿದರೆ ಅನಂತರ ಅವರು ದೂರನ್ನೂ ನೀಡದೆ, ಪತ್ರಿಕೆಯ ಕಚೇರಿಗೂ ತಿಳಿಸದೆ ಹೊರಟುಹೋಗಿದ್ದಾರೆ.

ಇವರುಗಳ ಜೊತೆಗೆ ಉತ್ತಮೇಶ್ವರದ ಪುಡಾರಿಯೊಬ್ಬರು ಬಂದಿದ್ದರು. ಅವರ ದೃಷ್ಟಿಯಲ್ಲಿ "ಠಾಣೆಗೆ ಹೋಗಿ ಕೇಳುವ ಅಗತ್ಯವೇನಿಲ್ಲ" (ಬಹುಶಃ ಅವರು ಹೇಳಿದಂತೆ ನೇರವಾಗಿ ಪತ್ರಿಕೆಯಲ್ಲಿ ಪ್ರಕಟಿಸಬೇಕಿತ್ತು. ಜೊತೆಗೆ, ತಾನು ಅದನ್ನು ಖಂಡಿಸಿದ್ದೇನೆನ್ನುವ 'ಹೇಳಿಕೆ' ಪ್ರಕಟವಾಗಬೇಕಿತ್ತು!)

ಈ ಪ್ರಕರಣಗಳ ಬಗ್ಗೆ ಪತ್ರಿಕೆಗಳ ಬೆನ್ನು ಹತ್ತಿರುವ ದಯಂಬಳ್ಳಿಯ ಒಬ್ಬ 'ಗಣ್ಯ'ರಾಗಲಿ, ಈ ಪುಡಾರಿಯಾಗಲಿ, ಪೋಲೀಸರಿಗೆ ಕ್ರಮ ಬದ್ಧವಾಗಿ ದೂರು ಕೊಡಿಸಿ, ಅನಂತರ ಆ ಬಗ್ಗೆ ದೊರೆಯುವ ಸುಳಿವುಗಳನ್ನೆಲ್ಲ ಪೋಲೀಸರಿಗೆ ತಿಳಿಸುತ್ತ, ಪ್ರಕರಣದ ಬೆನ್ನು ಹತ್ತುವುದು ಸರಿಯಾದ ಮಾರ್ಗ. ಇಂಥ ಕ್ರಮಬದ್ಧವಾದ ಮಾರ್ಗೋಪಾಯಗಳಿಗೆ ಬದಲು ಪತ್ರಿಕೆಗಳನ್ನು ಒಳದಾರಿಯಾಗಿ ಬಳಸುವುದು ಆರೋಗ್ಯಕರ ಪ್ರವೃತ್ತಿಯಲ್ಲ.

ಆದ್ದರಿಂದ, ದಯಂಬಳ್ಳಿ ಅಥವಾ ಬೇರಲ್ಲೇ ಆಗಲಿ, **ಬಲಾತ್ಕಾರವಾಗಿ** ಯುವತಿಯರನ್ನು ಬೊಂಬಾಯಿಗೆ ಸಾಗಿಸುವುದು ನಡೆಯುತ್ತಿದೆಯಾದಲ್ಲಿ ಅದನ್ನು ತಡೆಗಟ್ಟಬೇಕೆಂಬ ವಾಸ್ತವಿಕವಾದ ಕಳಕಳಿ ಇರುವವರು ಮೇಲೆ ಹೇಳಿದಂತೆ ಕ್ರಮಬದ್ಧವಾದ ಮಾರ್ಗ ಅನುಸರಿಸಬೇಕು. **ಪತ್ರಿಕೆಗಳ ಪ್ರಯತ್ನ ಅಥವಾ ಪಾತ್ರ ಏನಿದ್ದರೂ ಪೂರಕ ಮಾತ್ರ ಎಂಬುದನ್ನು ಅರಿಯಬೇಕು.**

## ಹಂದಿ ಸಾಕಣೆ ಕೇಂದ್ರದ ಫಲಾನುಭವಿಗಳಿಗೆ ಮೋಸ?

(ವರದಿ : **ಕಲ್ಕುಳಿ ವಿಠಲ ಹೆಗ್ಡೆ**)

ಶೃಂಗೇರಿ: ದೇಶದಲ್ಲಿಯೇ ಪ್ರಪ್ರಥಮವಾದ ನೆಮ್ಮಾರಿನ ಹಂದಿ ಸಾಕಣೆ ಕೇಂದ್ರ (ಡ್ವಾಕ್ರಾ)ದ ವಹಿವಾಟಿನಲ್ಲಿ ಸುಮಾರು 10 ಸಾವಿರ ರೂ.ಗಳಿಗೂ ಮಿಕ್ಕಿದ ಅವ್ಯವಹಾರ ನಡೆದಿರುವ ಸುಳಿವು ಹೊರ ಬಿದ್ದಿದೆ. 9,000 ರೂ.ಗೂ ಮಿಕ್ಕಿದ ವೆಚ್ಚಗಳಿಗೆ ವೋಚರ್‌ಗಳಿಲ್ಲದಿರುವುದು, ಒಂದು ವೋಚರಿನಲ್ಲಿ 1000 ರೂ. ವ್ಯತ್ಯಾಸವಿರುವುದು ಮುಂತಾದ ವ್ಯತ್ಯಾಸಗಳು ಬೆಳಕಿಗೆ ಬಂದಿದ್ದು, ಹೆಚ್ಚಿನ ತನಿಖೆ ನಡೆಯುತ್ತಿದೆ. ಇದರ ಉಸ್ತುವಾರಿಕೆ ಶೃಂಗೇರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳದೂ, ವಹಿವಾಟು ಚಿಕ್ಕಮಗಳೂರು-ಕೊಡಗು ಗ್ರಾಮೀಣ ಬ್ಯಾಂಕಿನ ನೆಮ್ಮಾರು ಶಾಖೆಯದೂ ಆಗಿದ್ದು, ಮುಗ್ಧ ಫಲಾನುಭವಿಗಳಿಗೆ ದೊಡ್ಡ ಪ್ರಮಾಣದಲ್ಲಿ ಮೋಸವಾಗಿರುವ ಸಾಧ್ಯತೆಯಿದೆ.

## ಅಂಗನವಾಡಿ ಕೇಂದ್ರಗಳ ಮುಚ್ಚುವಿಕೆಗೆ ವಿರೋಧ

ಕೊಪ್ಪ: ತಾಲ್ಲೂಕಿನಲ್ಲಿ ಹಲವಾರು ಅಂಗನವಾಡಿ ಕೇಂದ್ರಗಳನ್ನು ಮುಚ್ಚಲು ಯೋಚಿಸಲಾಗಿದೆ ಎಂಬ ವರದಿಗಳನ್ನಾಧರಿಸಿ, ಈ ಕ್ರಮವನ್ನು ಕೊಪ್ಪ ತಾ[...] ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕ[...] ಸಂಘ ತೀವ್ರವಾಗಿ ಖಂಡಿಸಿ, ಈ ಬಗ್ಗೆ ಮೆ[...] 13ರಂದು ಬಾಲವಿಕಾಸ ಯೋಜನಾಧಿಕಾ[ರಿ]ಗಳ ಕಚೇರಿಯೆದುರು ಧರಣಿ ನಡೆಸಲು ನಿರ್ಧರಿಸಿದೆ.

ಸರ್ಕಾರಿ ಶಾಲೆಗಳಂತೆ ಅಂಗನವಾಡಿ ಮಕ್ಕಳಿಗೂ ಉಚಿತ ಸಮವಸ್ತ್ರಗಳನ್ನು ನೀಡಬೇಕು ಹಾಗೂ ಅಂಗನವಾಡಿ ಉದ್ಯೋಗಿಗಳ ಸೌಲಭ್ಯಗಳನ್ನು ಹೆಚ್ಚಿ[ಸ]ಬೇಕೆಂದು ಸಂಘವು ಸರ್ಕಾರವನ್ನು ಒತ್ತಾಯಿಸಿದೆ.

ಸರ್ಕಾರ ಅಂಗನವಾಡಿ ಮುಚ್ಚು[...] ಪ್ರಯತ್ನ ಮಾಡಿದಲ್ಲಿ ತೀವ್ರವಾದ ಚಳ[ು]ವಳಿ ನಡೆಸಲೂ ತೀರ್ಮಾನಿಸಿದೆ.

ರಾಜ್ಯ ಮಟ್ಟದ ಕೆಸರುಗದ್ದೆ ಓಟ:

## ನಾಗೇಂದ್ರ, ಗೀತಾ ಪ್ರಥಮ

ಕೊಪ್ಪ: ಇಲ್ಲಿನ ಬಾಳಗಡಿಯಲ್ಲಿ ಏ. 27ರಂದು ನಡೆದ ರಾಜ್ಯ ಮಟ್ಟದ ಕೆಸರು ಗದ್ದೆ ಓಟದಲ್ಲಿ ತೀರ್ಥಹಳ್ಳಿಯ ನಾಗೇಂದ್ರ ಮತ್ತು ಚಿಕ್ಕಮಗಳೂರಿನ ಕೆ. ಕೆ. ಗೀತಾ ಪ್ರಥಮ ಸ್ಥಾನ ಪಡೆದರು.

ಚಿಕ್ಕಮಗಳೂರಿನ ಗೋಪಾಲ ಗೌಡ ಮತ್ತು ಕೆ.ಬಿ. ಶೈಲಾ ದ್ವಿತೀಯ ಸ್ಥಾನವನ್ನೂ, ಹಗ್ಗ ಎಳೆಯುವ ಸ್ಪರ್ಧೆಯಲ್ಲಿ ಬಾಳೆಹೊನ್ನೂರಿನ ಸ್ಟೀಫನ್ ತಂಡ ಪ್ರಥಮ ಹಾಗೂ ಬಾಳಗಡಿಯ ಜಾಯ್ಸ್ ತಂಡ ದ್ವಿತೀಯ ಸ್ಥಾನವನ್ನೂ ಗಳಿಸಿದರು.

### ಉತ್ಸಾಹ

ಬಾಳಗಡಿಯ ಸರ್ವೋದಯ ಯುವಕ ಸಂಘ ಹಾಗೂ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಆಶ್ರಯದಲ್ಲಿ ನಡೆದ ಈ ಸ್ಪರ್ಧೆಗಳು ಉತ್ಸಾಹ ಮತ್ತು ಕುತೂಹಲಕರವಾಗಿ ನಡೆದವು. ಕೆಸರುಗದ್ದೆ ಓಟದ ಸ್ಪರ್ಧೆಯಲ್ಲಿ 120 ಜನ ಹಾಗೂ ಹಗ್ಗ ಎಳೆಯುವ ಸ್ಪರ್ಧೆಯಲ್ಲಿ 8 ತಂಡಗಳವರು ಭಾಗವಹಿಸಿದ್ದರು.

### ಪಾರಿತೋಷಕ

ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಶಿವಮೊಗ್ಗ ರೆಡ್‌ಕ್ರಾಸ್ ಸಂಸ್ಥೆ ಕಾರ್ಯದರ್ಶಿ ಎ. ಜೆ. ಭಾಸ್ಕರ ರಾವ್ ಅವರು, ತಮ್ಮ ವಿದ್ಯಾಭ್ಯಾಸ ಸಮಯದಲ್ಲಿ ಆಶ್ರಯ ನೀಡಿ ನೆರವಿತ್ತ ತಮ್ಮ ಗುರುಗಳಾದ ಬಾಳಗಡಿ ದಿ॥ ಶ್ರೀ[ನಿ]ವಾಸರಾವ್ ಮತ್ತು ಅವರ ಪತ್ನಿಯ ಸ್ಮ[ರ]ಣಾರ್ಥ ಪರ್ಯಾಯ ಪಾರಿತೋಷಕ [...]ಡುವುದಾಗಿಯೂ, ಪ್ರತಿ ವರ್ಷ ಕ್ರೀಡೆ[ಗೆ ]ತಗಲುವ ವೆಚ್ಚವನ್ನು ನೀಡುವುದಾಗಿಯೂ ಘೋಷಿಸಿದರು.

ಸ್ಪರ್ಧೆಗಳಲ್ಲಿ ಭಾಗವಹಿಸಿದ ಎಲ್ಲಾ [ಸ್ಪ]ರ್ಧಾಳುಗಳಿಗೂ, ತನು-ಮನ-ಧನ ಸಹಾಯ ನೀಡಿದ ಎಲ್ಲರಿಗೂ, ಹಾಗೂ ಈ ಸ್ಪರ್ಧೆಗಳು ಯಶಸ್ವಿಯಾಗಲು ಸಹಕರಿಸಿದ ಎ[ಲ್ಲ]ರಿಗೂ ಸರ್ವೋದಯ ಯುವಕ ಸಂಘ ಕೃತಜ್ಞತೆಯನ್ನು ಸಲ್ಲಿಸಿದೆ.

## ಕಡಬಗೆರೆ ಮಹಿಳೆ ಕೊಲೆ ಆರೋಪಿ ವಿಲಿಯಂ ಬಂಧ[ನ]

ಬಾಳೆಹೊನ್ನೂರು: ಇಲ್ಲಿಗೆ ಸಮೀಪ[ದ] ಕಡಬಗೆರೆಯಲ್ಲಿ ಏ. 1ರಂದು ದೇವಮ[...] ಎಂಬ ಮಹಿಳೆಯನ್ನು ಕೊಲೆ ಮಾ[ಡಿ] ಆಕೆಯ ಕೊರಳಲ್ಲಿದ್ದ ಬಂಗಾರದ 17 ಗ[ುಂ]ಡುಗಳನ್ನು ಕದ್ದೊಯ್ದಿದ್ದ ಅದೇ ಗ್ರಾಮ[ದ] ವಿಲಿಯಂ ಎಂಬಾತನನ್ನು ಪೋಲೀಸ[ರು] ಬೊಂಬಾಯಿಯಲ್ಲಿ ಮಾಲು ಸಮೇತ ಬ[ಂ]ಧಿಸಿದ್ದಾರೆ. ಸರ್ಕಲ್ ಇನ್‌ಸ್ಪೆಕ್ಟರ್ ಕೇಶ[ವಾ]ನಂದ್ ತನಿಖೆ ನಡೆಸಿದ್ದು, ನ. ರಾ. ಪು[...] ಎಸ್ಸೈ ಭಂಡಾರಿ ಆರೋಪಿಯನ್ನು ಬಂಧಿ[ಸಿ]ದರು. ಇವರಿಬ್ಬರ ಕಾರ್ಯವನ್ನು ಎ[...] ಶ್ಲಾಘಿಸಿದ್ದಾರೆ.

# ಜಾದೂಗಾರ v/s ಮಂತ್ರವಾದಿ

**ಮಾಟ-ಮಂತ್ರಗಳು, ತೀರ್ಥ-ವಿಭೂತಿಗಳು, ದೈವೀ ಶಕ್ತಿಗಳು— ಇಂಥವುಗಳಿಂದ ಜನಸಾಮಾನ್ಯರ ಸಮಸ್ಯೆ ಮತ್ತು ರೋಗಗಳಿಗೆ 'ಪರಿಹಾರ' ದೊರಕಿಸುತ್ತೇವೆನ್ನುವ 'ವಿಭೂತಿ ಪುರುಷ'ರು ವಿದೇಶಗಳಲ್ಲಿ ಸಹ ಚಲಾವಣೆಯಲ್ಲಿದ್ದಾರಂತೆ. ಭಾರತ ಸಂಜಾತರಾಗಿ ಶ್ರೀಲಂಕಾದಲ್ಲಿ ನೆಲೆಸಿದ್ದ ದಿ|| ಡಾ. ಅಬ್ರಹಾಂ ಕೋವೂರ್ ಇಂಥ 'ದೈವೀ ವ್ಯಕ್ತಿ'ಗಳ ಕೈ ಚಳಕ-ಚಾಯಿತ್ ಚಳಕಗಳನ್ನು ಬಯಲು ಮಾಡುತ್ತ, ಜನರಲ್ಲಿ ಪ್ರಜ್ಞೆ ಮೂಡಿಸಲು ಶ್ರಮಿಸುತ್ತಲೇ ಕೊನೆಯುಸಿರೆಳೆದರು.**

**ವಿಶ್ವವಿಖ್ಯಾತ ಐಂದ್ರಜಾಲಿಕ ಜೇಮ್ಸ್ ರ್‍ಯಾಂಡಿ ಇಂಥದೇ ಧ್ಯೇಯಕ್ಕಾಗಿ ದುಡಿಯುತ್ತಿರುವ ಮತ್ತೊಬ್ಬ ಅಗ್ರಗಣ್ಯರು.**

ವರ್ಷದ ಅತ್ಯಂತ ಪ್ರತಿಭಾವಂತ ವ್ಯಕ್ತಿಗಳಿಗೆ ನೀಡಲಾಗುವ 25 ಲಕ್ಷ ರೂ. ಮೊತ್ತದ ಮೆಕ್ ಆರ್ಥರ್ ಅನುದಾನವನ್ನು ಈ ವರ್ಷ ಪಡೆದವರ ಪೈಕಿ ಒಬ್ಬ ಜಾದೂಗಾರನೂ ಸೇರಿದ್ದಾನೆ. ಆತನ ಹೆಸರು ಜೇಮ್ಸ್ ರ್‍ಯಾಂಡಿ. ಆತನ ಕಸಬು—ಮಾಟ ಮಂತ್ರದ ಹೆಸರಿನಲ್ಲಿ ಮುಗ್ಧ ಜನರನ್ನು ಶೋಷಿಸುವ ದೈವೀ ಮಾನವರ ಕುಟಿಲ ತಂತ್ರಗಳನ್ನೆಲ್ಲ ಬಯಲಿಗೆಳೆಯುವುದು.

'ಅತ್ಯದ್ಭುತ ರ್‍ಯಾಂಡಿ' ಎಂದೇ ಅಮೇರಿಕದಲ್ಲಿ ಪರಿಚಿತನಾಗಿರುವ 57 ವಯಸ್ಸಿನ ರ್‍ಯಾಂಡಿ ವಿಶ್ವದ ಖ್ಯಾತ ಐಂದ್ರಜಾಲಿಕರಲ್ಲೊಬ್ಬ. ಆದರೆ ಕೇವಲ ಮನರಂಜನೆಗೆ ಜಾದೂ ವಿದ್ಯೆ ಪ್ರದರ್ಶಿಸುವ ಬದಲು ಆತ ಕಳೆದ ಹಲವು ವರ್ಷಗಳಿಂದ ದೇವಾಂಶ ಸಂಭೂತರೆಂದು ಹೇಳಿಕೊಳ್ಳುವ ಬಾಬಾಗಳ ವಿರುದ್ಧ ಸಮರ ಸಾರಿದ್ದಾನೆ.

ನಮ್ಮಲ್ಲಿರುವಂತೆ ಪಾಶ್ಚಾತ್ಯ ದೇಶಗಳಲ್ಲೂ ಮಂಕು ಬೂದಿ, ತೀರ್ಥ-ಪ್ರಸಾದಗಳಿಂದ ರೋಗ ವಾಸಿ ಮಾಡುವ ಕಪಟ ವೈದ್ಯರ ಸಂಖ್ಯೆ ಸಾಕಷ್ಟು ಹೆಚ್ಚಿದೆ. ವ್ಯತ್ಯಾಸ ಏನೆಂದರೆ, ಅಲ್ಲಿಯ ಢೋಂಗಿ ಪಂಡಿತರು ಆಧುನಿಕ ವಿಜ್ಞಾನ— ತಂತ್ರಜ್ಞಾನದ ಸಹಾಯದಿಂದಲೇ ತಮ್ಮ 'ದೈವೀ ಶಕ್ತಿ'ಯ ಪ್ರದರ್ಶನ ಮಾಡುತ್ತಾರೆ. ಕಂಪ್ಯೂಟರ್ ಸಹಾಯದಿಂದ ಭಕ್ತವೃಂದದ ಖಾಸಗಿ ಮಾಹಿತಿ (ಹೆಸರು, ಚರಿತ್ರೆ, ರೋಗ, ಆಸ್ತಿಪಾಸ್ತಿ, ಸಮಸ್ಯೆ ಇತ್ಯಾದಿ) ಸಂಗ್ರಹಿಸಿಕೊಳ್ಳುತ್ತಾರೆ. ಕಿವಿಯಲ್ಲಿ ಅತಿಸೂಕ್ಷ್ಮ ರೇಡಿಯೋ ರಿಸೀವರ್ ಇಟ್ಟುಕೊಂಡು, ಜನರ ಮಧ್ಯೆ ಓಡಾಡುತ್ತ ಅವರ ಸಮಸ್ಯೆಗಳನ್ನು ಸಮುಚಿತವಾಗಿಯೇ ಗುರುತಿಸಿ 'ಉಪದೇಶ' ನೀಡುತ್ತಾರೆ ಪೀಟರ್ ಪೊಪಾಫ್ ಎಂಬ ಖ್ಯಾತ 'ದೈವೀಶಕ್ತಿ'ಯ ವ್ಯಕ್ತಿಯ ರಹಸ್ಯವನ್ನು ರ್‍ಯಾಂಡಿ ಬಹಿರಂಗಗೊಳಿಸಿದ್ದ. ಇಂಥ ಢೋಂಗಿ ವ್ಯಕ್ತಿಗಳ ಉಪದೇಶಕ್ಕೆ ಮರುಳಾಗಿ ಭಕ್ತವೃಂದ ಅಮೂಲ್ಯ ಔಷಧಗಳನ್ನು ಕಸದ ಬುಟ್ಟಿಗೆ ಬಿಸಾಕಿ, ತೀರ್ಥ ಕುಡಿದು ರೋಗ ಉಲ್ಬಣ ಮಾಡಿಕೊಂಡಿದ್ದನ್ನೂ ರ್‍ಯಾಂಡಿ ಟೆಲಿವಿಷನ್ ಪ್ರದರ್ಶನಗಳಲ್ಲಿ ವಿವರಿಸಿದ.

ಭಾರತದಲ್ಲೂ ಜಾದೂಗಾರರ ಹಾಗೂ ಬಾಬಾಗಳ ಮಧ್ಯೆ ಅಗೋಚರ ಘರ್ಷಣೆ ಇದ್ದೇ ಇದೆ. ಬಂಗಾಲದ ಪಿ.ಸಿ. ಸರ್ಕಾರ್ (ಜ್ಯೂನಿಯರ್) ಖುದ್ದಾಗಿ ಸಾಯಿಬಾಬಾಗೇ ಖಾಲಿ ಕೈಯಲ್ಲಿ ರಸಗುಲ್ಲಾ ಸೃಷ್ಟಿಮಾಡಿ ನೀಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಕೇವಲ ವೃತ್ತಿ ಮಾತ್ಸರ್ಯ ಅಥವಾ ಸೈಪೋಟಿಯದೃಷ್ಟಿಯಿಂದ ಬಾಬಾಗಳನ್ನು ಬಯಲಿಗೆಳೆದರೆ ಸಾಲದು. ಮುಗ್ಧ ಜನಕ್ಕೆ ಶಿಕ್ಷಣ ನೀಡುವುದೂ ಅದರ ಉದ್ದೇಶವಾಗಿರಬೇಕು ಎಂಬುದನ್ನು ಕೇರಳ ಶಾಸ್ತ್ರ (ವಿಜ್ಞಾನ) ಪರಿಷತ್ ತೋರಿಸಿಕೊಟ್ಟಿದೆ. ಅಲ್ಲಿನ ಪರಮಾನಂದ್ ಎಂಬವರು, ಇದಕ್ಕೆಂದೇ ಜಾದೂ ಕಲಿತು, **ಸಾಯಿಬಾಬಾ ಮಾಡುವ ಎಲ್ಲಾ ಮಾಟಗಳನ್ನೂ ಬಹಿರಂಗವಾಗಿ ಮಾಡಿ ತೋರಿಸುತ್ತಾರೆ.** ಬಸವನಗುಡಿ ನ್ಯಾಷನಲ್ ಕಾಲೇಜಿನ ವಿಜ್ಞಾನ ವೇದಿಕೆಯಲ್ಲಿ ಅವರು ನೀಡಿದ ಪ್ರದರ್ಶನ ಅನೇಕರನ್ನು ಮೂಕವಿಸ್ಮಿತರನ್ನಾಗಿ ಮಾಡಿದೆ. ವಾಚು, ಬೂದಿ, ತಾಯಿತಗಳನ್ನು ಶೂನ್ಯದಲ್ಲಿ ಸೃಷ್ಟಿಮಾಡುವ ತಂತ್ರಗಳನ್ನು ಅವರು ಪುಕ್ಕಟೆ ವಿವರಿಸುತ್ತಾರೆ. ಅದೂ ಒಂದು ಸಮಾಜಕಲ್ಯಾಣದ ಸಾಧನೆ ಎಂಬುದನ್ನು ಗುರುತಿಸಿ ಪ್ರೋತ್ಸಾಹಿಸುವ ಮನೋಭಾವ ನಮ್ಮ ವಿಜ್ಞಾನ ರಂಗದಲ್ಲಿ ಮೂಡಿದಾಗ ಪ್ರಾಯಶಃ ನಮ್ಮಲ್ಲೂ ಪ್ರತಿಭೆಗಳು ಬೆಳಕಿಗೆ ಬರಬಹುದು.

ಅಮೋನಿಯಮ್ ಆಕ್ಸಲೇಟ್, ಟಾರ್ಟರಿಕ್ ಆ್ಯಸಿಡ್ ನಂಥ ರಸಾಯನ ಬಳಿದರೆ ಯಾವ ಫೋಟೋದಿಂದಾದರೂ ಬೂದಿ ಉದುರಿಸಬಹುದೆಂದು ಈಗ ಕಾಲೇಜು ವಿದ್ಯಾರ್ಥಿಗಳಿಗೂ ಗೊತ್ತಾಗಿದೆ: ನಿಕೆಲ್–ಟೈಟಾನಿಯಮ್‌ನ ಮಿಶ್ರಲೋಹವಾದ 'ನಿಟಿನಾಲ್'ನಲ್ಲಿ ಜ್ಞಾಪಕಶಕ್ತಿ ಇರುತ್ತದೆಂಬ ರಹಸ್ಯ ಮಾತ್ರ ಈಗಲೂ ಜಾದೂಗಾರರಿಗೆ ಮತ್ತು ಪ್ರಾಯಶಃ ಮಂತ್ರವಾದಿಗಳಿಗಷ್ಟೇ ಗೊತ್ತು. ಲೋಹ ವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಅದು ಇನ್ನೂ ಪ್ರಸ್ತಾಪ ಆಗಿಲ್ಲ. ಈ ಮಿಶ್ರ ಲೋಹವನ್ನೆ ಬಳಸಿ ಖ್ಯಾತ ಜಾದೂಗಾರ ಯೂರಿ ಗೆಲ್ಲರ್, 'ಮನೋಬಲ'ದಿಂದ ಎಂದು ಹೇಳಿಕೊಂಡು ಚಮಚ, ತಂತಿಗಳನ್ನು ಡೊಂಕು ಮಾಡುತ್ತಿದ್ದನೆಂದು ಇನ್ನೊಬ್ಬ ಖ್ಯಾತ ಜಾದೂಗಾರ ಹಾಗೂ ವಿಜ್ಞಾನ ಲೇಖಕ ಡಾ. ಮಾರ್ಟಿನ್ ಗಾರ್ಡನರ್ ವಿವರಿಸಿದ್ದಾನೆ.

ರ್‍ಯಾಂಡಿಗೆ ನೀಡಲಾದ ಮೆಕ್ ಆರ್ಥರ್ ಅನುದಾನ ನಾಲ್ಕು ವರ್ಷಗಳ ಹಿಂದೆ ಕರ್ನಾಟಕದ ಕವಿ ಎ.ಕೆ. ರಾಮಾನುಜನ್ ಅವರಿಗೂ ಲಭಿಸಿದೆ. ಐದು ವರ್ಷಗಳ ಅವಧಿಯಲ್ಲಿ ಈ ಮೊತ್ತವನ್ನು ಅವರು ತಮಗಿಷ್ಟ ಬಂದಂತೆ ವ್ಯಯಿಸಬಹುದು. ರ್‍ಯಾಂಡಿ ಈ ಹಣದಲ್ಲಿ ಕಂಪ್ಯೂಟರ್ ಕೊಳ್ಳಲು ನಿರ್ಧರಿಸಿದ್ದು ಮಾಯಾವಿಗಳ ವಿಶ್ವ ಮಾಹಿತಿ ಕೋಶವೊಂದು ರೂಪುಗೊಳ್ಳಲಿದೆ. ಅದರಲ್ಲಿ ಎಷ್ಟು ಮಂದಿ ಭಾರತೀಯ ಖ್ಯಾತನಾಮರ ಹೆಸರು ಸೇರ್ಪಡೆಯಾಗುತ್ತೋ ನೋಡಬೇಕು !

(ಸೌಜನ್ಯ : 'ಪ್ರಜಾವಾಣಿ')

## ಚಿನಾರಿ ಕೂಟ

### ಜಾಣ ಪ್ರಶ್ನೆಗಳು

1) ಭೂಮಿಗಿಂತ ಘನವಾದುದು ಯಾವುದು?

2) ಗಾಳಿಗಿಂತ ವೇಗವುಳ್ಳದ್ದು ಯಾವುದು?

3) ದೇಶಾಂತರಕ್ಕೆ ಹೋದವನಿಗೆ ಗೆಳೆಯ ಯಾರು?

4) ಎಂಥ ಕಷ್ಟದಲ್ಲೂ ಮನುಷ್ಯನಿಗೆ ಸಹಾಯಕವಾಗುವುದು ಯಾವುದು?

5) ಭಾರತದ ಬೆನ್ನೆಲುಬು ಯಾರು?

6) ಪ್ರಪಂಚದಲ್ಲಿ ಇಲ್ಲದಿರುವ 3 ವಸ್ತುಗಳು ಯಾವುವು?

7) ಮಾನವರಲ್ಲಿ ಎಷ್ಟು ಜಾತಿ? ಯಾವುವು? (ಉತ್ತರ ಮುಂದಿನ ಬಾರಿ)

ಸಂಗ್ರಹ: **ಡಿ.ಟಿ. ಅಶೋಕ್.**

[ಜಾಣ ಮಕ್ಕಳೆ, ಈ ಜಾಣ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದು 'ಚಿನಾರಿ ಕೂಟ'ಕ್ಕೆ ಕಳಿಸಿ. ಅತಿ ಹೆಚ್ಚು ಸರಿ ಉತ್ತರ ಕಳಿಸಿದವರಿಗೆ ಬಹುಮಾನವಿದೆ., ಯಾರಾದರೂ ಪೂರ್ತಿ ಸರಿಯುತ್ತರ ಕಳಿಸಿದರೆ ಅವರಿಗೆ ಡಬ್ಬಲ್ ಬಹುಮಾನ! (ಅದಕ್ಕಾಗಿ ನಿಮ್ಮ ತಂದೆ–ತಾಯಿ ಅಥವಾ ಹಿರಿಯರಿಂದ ಹೇಳಿಸಿಕೊಳ್ಳಬಾರದು, ಹಾಂ?)

ಉತ್ತರಗಳು ನಮಗೆ 15–5–87ರೊಳಗೆ ತಲುಪಬೇಕು. ನೀವೂ ಇಂಥದೇ ಜಾಣ ಪ್ರಶ್ನೆಗಳನ್ನು ಹುಡುಕಿ ಸಂಗ್ರಹಿಸಿ, ಉತ್ತರ ಸಮೇತ ಕಳಿಸಬಹುದು. ಪ್ರಯತ್ನಿಸಿ.

—ಸಂಪಾದಕ.]

### ಏಕಬುದ್ಧಿ - ಸಹಸ್ರಬುದ್ಧಿ

ಕಾಡಿನ ಬದಿಯಲ್ಲಿ ಒಂದು ಕೊಳವಿತ್ತು. ಅದರಲ್ಲಿ ಮೀನು, ಕಪ್ಪೆ, ಏಡಿ ಮುಂತಾದ ಜಲಚರಗಳೆಲ್ಲ ವಾಸವಾಗಿದ್ದವು. ಅವುಗಳಲ್ಲಿ ಸಹಸ್ರಬುದ್ಧಿ ಮತ್ತು ಶತಬುದ್ಧಿ ಎಂಬ ಎರಡು ದೊಡ್ಡ ಮೀನುಗಳು, ಏಕಬುದ್ಧಿ ಎಂಬ ಕಪ್ಪೆ ಮತ್ತು ಅದರ ಹೆಂಡತಿ ತುಂಬ ಸ್ನೇಹದಿಂದಿದ್ದವು.

ಒಮ್ಮೆ ಆ ದಾರಿಯಾಗಿ ಇಬ್ಬರು ಮೀನುಗಾರರು ಹೋಗುತ್ತಿದ್ದರು. ಈ ಎರಡು ದೊಡ್ಡ ಮೀನುಗಳು ಅವರ ಕಣ್ಣಿಗೆ ಬಿದ್ದವು. ಅವರಲ್ಲೊಬ್ಬ ಕೂಡಲೇ ಅವುಗಳನ್ನು ಹಿಡಿಯೋಣವೆಂದ. ಅದಕ್ಕೆ ಇನ್ನೊಬ್ಬ ಹೇಳಿದ—

"ತಾಳು, ಅವಸರ ಮಾಡಬೇಡ. ಇನ್ನೂ ತುಂಬ ಮೀನುಗಳಿರಬಹುದು. ನಾಳೆಯ ದಿನ ನಮ್ಮ ಬಲೆಯನ್ನು ತಂದು ಅವುಗಳನ್ನು ಹಿಡಿಯೋಣ"

ಅಂತೆಯೇ ಅವರಿಬ್ಬರೂ ಹೊರಟು ಹೋದರು.

ಏಕಬುದ್ಧಿ ತನ್ನ ಗೆಳೆಯರಿಗೆ "ಅವರು ಮಾತಾಡಿಕೊಂಡಿದ್ದನ್ನು ಕೇಳಿದಿರಾ? ನಾಳೆ ಅವರು ಬರುವುದರೊಳಗಾಗಿ ನಾವು ಬೇರೊಂದು ಸುರಕ್ಷಿತವಾದ ಸ್ಥಳಕ್ಕೆ ಹೊರಟು ಹೋಗಿ ಬಿಡೋಣ" ಎಂದಿತು.

ಅದಕ್ಕೆ ಸಹಸ್ರ ಬುದ್ಧಿ ಹೇಳಿತು—"ಏನು ಮಾತು ಗೆಳೆಯ? ನಾಳೆ ಅವರು ಬಂದರಲ್ಲವೆ? ಅವರು ಬಾರದೆಯೂ ಇರಬಹುದು"

ಏಕಬುದ್ಧಿ ಹೇಳಿತು— "ಅವರು ಬಾರದಿದ್ದರೆ ಒಳ್ಳೆಯದೇ. ಆದರೆ ಆಕಸ್ಮಾತ್ ಅವರು ಬಂದೇ ಬಿಟ್ಟರೆ ಮತ್ತೆ ನಾವು ಅಪಾಯದಿಂದ ಪಾರಾಗಲು ಆಗುವುದಿಲ್ಲವಲ್ಲ".

"ಓಹೋ, ಹಾಗೊಂದು ವೇಳೆ ಅವರು ಬಂದರೂ ನನ್ನ ಬಳಿ ಸಹಸ್ರ ಉಪಾಯಗಳಿವೆ. ನಾವು ಸುಲಭವಾಗಿ ಪಾರಾಗಬಹುದು"

ಶತಬುದ್ಧಿಯೂ ದನಿಗೂಡಿಸಿತು— "ಹೌದು ಗೆಳೆಯ. ಅವರು ಬಂದಾರೆಂಬ ಭಯಕ್ಕೆ ನಾವು ಇಷ್ಟು ವರ್ಷಗಳಿಂದ ವಾಸವಿರುವ ಈ ಸ್ಥಳವನ್ನು ಬಿಡಬೇಕೆ? ಗೆಳೆಯನ ಸಹಸ್ರ ಉಪಾಯಗಳಲ್ಲದೆ ನನ್ನವೂ ನೂರು ಉಪಾಯಗಳಿವೆ. ಏನೂ ಭಯಪಡಬೇಡ. ಇಲ್ಲೇ ಹಾಯಾಗಿರೋಣ."

ಆದರೆ ಏಕಬುದ್ಧಿಗೆ ಈ ವಿಚಾರ ಸರಿಬರಲಿಲ್ಲ. ಅದು ಹೇಳಿತು — "ಇಲ್ಲ ಗೆಳೆಯರೆ. ಅವರು ಬಂದು ಬಲೆ ಬೀಸಿದ ಮೇಲೆ ತಪ್ಪಿಸಿಕೊಳ್ಳಲು ಪರದಾಡುವುದಕ್ಕಿಂತ ಈಗಲೇ ತಪ್ಪಿಸಿಕೊಳ್ಳುವುದು ಮೇಲು. ನಾನಂತೂ ನನ್ನ ಹೆಂಡತಿಯೊಂದಿಗೆ ನನಗೆ ಗೊತ್ತಿರುವ ಒಂದು ಸುರಕ್ಷಿತ ಸ್ಥಳಕ್ಕೆ ಹೋಗುತ್ತಿದ್ದೇನೆ."

ಇಷ್ಟು ಹೇಳಿ ಏಕಬುದ್ಧಿ ತನ್ನ ಹೆಂಡತಿಯೊಂದಿಗೆ ಆ ಕೊಳದಿಂದ ಹೊರಟು ಬಿಟ್ಟಿತು.

ಮರುದಿನ ಮೀನುಗಾರರು ಬಲೆಯೊಂದಿಗೆ ಬಂದೇ ಬಿಟ್ಟರು. ಅವರು ಕೊಳದಲ್ಲಿ ಬಲೆ ಬೀಸಿದಾಗ ಬೇರೆ ಜಲಚರಗಳ ಜೊತೆಗೆ ಸಹಸ್ರಬುದ್ಧಿ, ಶತಬುದ್ಧಿಗಳೂ ಅದರಲ್ಲಿ ಸಿಕ್ಕಿಹಾಕಿಕೊಂಡವು. ಎಷ್ಟು ಹೆಣಗಾಡಿದರೂ ತಪ್ಪಿಸಿಕೊಳ್ಳಲು ಆಗಲಿಲ್ಲ.

"ಅಯ್ಯೋ, ಈ ಬಲೆ ಬಹಳ ಗಟ್ಟಿಯಾಗಿದೆ. ನಾವು ಕೆಟ್ಟೆವು. ಒಮ್ಮೆ ಹೇಗಾದರೂ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಿದ್ದರೆ ಏನಾದರೂ ಉಪಾಯ ಯೋಚಿಸಬಹುದಿತ್ತು....."

ಹೀಗೆಂದು ಅವು ಯೋಚಿಸುತ್ತಿರುವಷ್ಟರಲ್ಲೇ ಮೀನುಗಾರರು ಬಲೆಯನ್ನು ಹೊರಗೆಳೆದು ಹಾಕಿದರು. ಎಲ್ಲ ಮೀನು–ಏಡಿಗಳ ಜೊತೆಗೇ ಈ ಎರಡು 'ಬುದ್ಧಿವಂತ' ಮೀನುಗಳೂ ಒದ್ದಾಡಿ ಸತ್ತವು. ಮೀನುಗಾರರು ಬಹಳ ಸಂತೋಷದಿಂದ ಅವನ್ನೆಲ್ಲ ಹೊತ್ತುಕೊಂಡು ನಡೆದರು.

ಮರೆಯಲ್ಲಿ ಕುಳಿತು ಇದನ್ನೆಲ್ಲ ನೋಡುತ್ತಿದ್ದ ಏಕಬುದ್ಧಿ ತನ್ನ ಹೆಂಡತಿಯನ್ನು ಕುರಿತು, "ನೋಡಿದೆಯಾ? ಎಷ್ಟು ಬುದ್ಧಿವಂತರಾದರೇನು? ನನ್ನ **ಒಂದು** ಬುದ್ಧಿ ಮಾತನ್ನು ಅವರು ಸ್ವಲ್ಪ ಯೋಚಿಸಿದ್ದರೆ ಅವರೂ ಪಾರಾಗಬಹುದಿತ್ತಲ್ಲ!" ಎಂದು ಬಹಳ ದುಃಖದಿಂದ ಹೇಳಿತು. (ಸಂಗ್ರಹ)

## ಎಲೆ ಮರೆಯ ಕವಿ, ಸ್ವಾತಂತ್ರ್ಯ ಹೋರಾಟಗಾರ

# ಹೊ. ನ. ಕೃಷ್ಣಪ್ಪನವರಿಗೆ ಹುಟ್ಟೂರಿನಲ್ಲಿ ಆತ್ಮೀಯ ಸನ್ಮಾನ

ಗಾಢ ಮಲೆನಾಡಿನ ಎಲೆ ಮರೆಯ ಕವಿ, ಸ್ವಾತಂತ್ರ್ಯ ಹೋರಾಟಗಾರ ಹೊ. ನ. ಕೃಷ್ಣಪ್ಪನವರನ್ನು ಅವರ ಹುಟ್ಟೂರಾದ ಬೆಳವಿನಕೊಡಿಗೆಯ ಗ್ರಾಮಸ್ಥರು ಏ. 26 ರಂದು ಸರಳ, ಸುಂದರ ಸಮಾರಂಭದಲ್ಲಿ ಆತ್ಮೀಯವಾಗಿ ಸನ್ಮಾನಿಸಿದರು.

ಉತ್ತಮೇಶ್ವರದ 'ಸ್ವಯಂ ಸೇವಾ ಕೇಂದ್ರ'ದ ಗೆಳೆಯರ ಮುಂದಾಳ್ತನದಲ್ಲಿ ನಡೆದ ಈ ಸಮಾರಂಭದ ಅಧ್ಯಕ್ಷತೆಯನ್ನು ಕೊಪ್ಪದ ವೈದ್ಯಾಧಿಕಾರಿ ಡಾ|| ಎಂ. ಜಿ. ಪ್ರಸಾದ್ ವಹಿಸಿದ್ದರು. ಕೃಷ್ಣಪ್ಪನವರ ಬಹುಕಾಲದ ಒಡನಾಡಿಗಳೂ ಆತ್ಮೀಯರೂ ಆದ ಬಾಳ್ತಾರು ಆನಂದರಾವ ಭಟ್ಟರು "ಇದೇ ಗ್ರಾಮದ ಹೊಸಹಳ್ಳಿಯಲ್ಲಿ ಹುಟ್ಟಿ ವಿಶ್ವ ಕುಟುಂಬಿಯಾಗಿ ಬೆಳೆದ" ಅವರ ಕಿರು ಪರಿಚಯ ಮಾಡಿಕೊಟ್ಟರು.

ಜಿಲ್ಲಾ ಪರಿಷತ್ ಸದಸ್ಯ ಬಿ. ಜಿ. ಚಿದಂಬರ್, ಮಂಡಲ ಪಂಚಾಯ್ತಿ ಸದಸ್ಯ ಬಿ. ಕೆ. ರಮೇಶ್, ಸಿರಿಮನೆ ನಾಗರಾಜ್ ಮತ್ತು ಡಾ|| ಪ್ರಸಾದ್ ಕೃಷ್ಣಪ್ಪನವರ ಜೀವನ–ಬರಹ–ದೃಷ್ಟಿಕೋನಗಳ ಬಗ್ಗೆ ಮಾತನಾಡಿದರು.

ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ನೋವುಂಡರೂ ಒಂದು 'ತಾಮ್ರ ಪತ್ರ'ವನ್ನೂ ಸಹ ಕೇಳದಿರುವ, ಅನಾರೋಗ್ಯ–ಕಡುಬಡತನಗಳಲ್ಲಿ ಬೇಯುತ್ತಿದ್ದರೂ ಸಹ, ಹಣಕಾಸಿನ ನೆರವು ಹಾಗಿರಲಿ, ಒಂದು ಹೊತ್ತಿನ ಊಟವನ್ನು ಕೂಡ ಯಾರಿಂದಲೂ ಬೇಡದಿರುವ ಕೃಷ್ಣಪ್ಪನವರ ಸ್ವಾಭಿಮಾನ; ಮೂಢನಂಬಿಕೆ, ಪೊಳ್ಳು 'ಪರೋಪಕಾರ', ಜಾತೀಯತೆಗಳ ವಿರುದ್ಧ ಸಿಡಿಯುತ್ತ ಭಾಷಾಭಿಮಾನ, ದೇಶಾಭಿಮಾನಗಳನ್ನೂ ವಿಶ್ವ ಭ್ರಾತೃತ್ವವನ್ನೂ ಪ್ರತಿಪಾದಿಸುವುದರ ಜೊತೆಗೆ, ಪ್ರೇಮ, ಪ್ರಕೃತಿ, ಸಮಾಜ–ಈ ಎಲ್ಲ ವಿಚಾರಗಳಲ್ಲೂ ಸ್ಪಂದಿಸುವ ಅವರ ಕವಿ ಹೃದಯ–ಇವುಗಳನ್ನು ಕುರಿತು ಭಾಷಣಕಾರರು ತಮ್ಮ ಅನುಭವಗಳನ್ನು ಮೆಲುಕು ಹಾಕಿದರು.

ಕೃಷ್ಣಪ್ಪನವರು ಮಾತನಾಡುತ್ತ, ತಮ್ಮ ಕಿರು ಸಾಹಿತ್ಯ ಕೃಷಿಯನ್ನು ಗುರ್ತಿಸಿ ಪುರಸ್ಕರಿಸಿದ ಎಲ್ಲರಿಗೂ ಧನ್ಯವಾದ ಸಲ್ಲಿಸಿದರು. ಸಮಾಜದಲ್ಲಿ ಒಳಿತಿನ ಬಗ್ಗೆ ಕಾಳಜಿ ಇಲ್ಲದವನಿಗೆ ಸಹೃದಯತೆ ಬರುವುದಿಲ್ಲ. ಸಹೃದಯತೆ ಇಲ್ಲದೆ ಕವನ ಅರ್ಥವಾಗುವುದಿಲ್ಲ. ಇಂದು ನಮ್ಮ ಸಮಾಜದಲ್ಲಿ ಪ್ರತಿಭೆಯನ್ನು ಗುರುತಿಸುವುದಕ್ಕೂ ಜಾತಿಯೇ ಮಾನದಂಡವಾಗುವಷ್ಟರ ಮಟ್ಟಿಗೆ ಜಾತೀಯತೆ ತುಂಬಿದೆ. ಇದನ್ನು ತೊಡೆದು ನಾವೆಲ್ಲ ಒಂದೇ ಕುಟುಂಬದವರೆಂಬ ಭಾವನೆ ಬೆಳೆಯದೆ ಹೋದಲ್ಲಿ ಈ ದೇಶದ ಸಂಸ್ಕೃತಿ ನಾಮಾವಶೇಷ ಹೊಂದೀತು ಎಂದು ಎಚ್ಚರಿಸಿದರು.

ಮಲೆನಾಡಿನ ಎಲ್ಲೆಡೆ ಇಂಥ ಎಷ್ಟೋ ಮಂದಿ ಉತ್ತಮ ಕವಿಗಳೂ ಕಲಾವಿದರೂ ಮರೆಯಾಗಿದ್ದಾರೆ. ಅಂಥವರಲ್ಲಿ ಬಹುತೇಕ ಜನ ಕಷ್ಟ ಕಾರ್ಪಣ್ಯಗಳಲ್ಲಿ ನಲುಗಿ ಹೋಗುತ್ತಿದ್ದಾರೆ. ಕಲಾವಿದರ ಇಂಥ ದುರ್ಭರ ಪರಿಸ್ಥಿತಿಗಳಿಂದಾಗಿ, ಮಲೆನಾಡಿಗೇ ವಿಶಿಷ್ಟವಾದ ಎಷ್ಟೋ ಕಲಾ ಪ್ರಕಾರಗಳೇ ಇಂದು ಅಳಿದು ಹೋಗುವ ಅಂಚಿನಲ್ಲಿವೆ. ಮನುಷ್ಯನಿಗೂ ಪ್ರಾಣಿಗಳಿಗೂ ಅಂತರವಿರುವುದೇ ಕಲೆ–ಸಾಹಿತ್ಯಗಳಿಂದೊಡಗೂಡಿದ ಮನುಷ್ಯನ ಈ ಸಾಂಸ್ಕೃತಿ ಮುಖದಲ್ಲಿ. ಆದ್ದರಿಂದ ನಮ್ಮ ಬದುಕಿನ ಜೀವಂತಿಕೆಗೆ ಅತ್ಯವಶ್ಯಕವಾದ ಈ ಸಾಂಸ್ಕೃತಿಕ ಬೆಳವಣಿಗೆಗೆ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯ್ತಿಗಳು ನಿಜವಾದ ಕಾಳಜಿಯಿಂದ, ವಿಶೇಷವಾದ ಮತ್ತು ನಿರಂತರವಾಗಿ ಉಳಿದು ಬರುವಂಥ ಸಮಗ್ರ ಕಾರ್ಯಕ್ರಮವೊಂದನ್ನು ರೂಪಿಸಬೇಕು..ಇದು ಗ್ರಾಮೀಣ ಅಭಿವೃದ್ಧಿಗಾಗಿಯೇ ರೂಪಿತವಾದ ಅವುಗಳ ಕರ್ತವ್ಯದ ಒಂದು ಅವಿಭಾಜ್ಯ ಅಂಗವೇ ಆಗಿದೆ –ಎಂದು 'ಸ್ವಯಂ ಸೇವಾ ಕೇಂದ್ರ'ದವರ ಒತ್ತಾಯಪೂರ್ವಕವಾದ ಸೂಚನೆಯ ... ಸಿರಿಮನೆ ನಾಗರಾಜ್ ಮುಂದಿಟ್ಟರು.

ಇದಕ್ಕಾಗಿ ಜಿಲ್ಲಾ ಪರಿಷತ್ ಅಡಿಯ... ಒಂದು ಪ್ರತ್ಯೇಕ ಟ್ರಸ್ಟನ್ನೇ ರಚಿಸಬೇ... ಎಂದ ಡಾ|| ಪ್ರಸಾದ್, ಟ್ರಸ್ಟ್ ಎಂ... ಅಂತುಳಿಯಂಥವರ ಟ್ರಸ್ಟ್‌ಗಳಂತಾಗದಿ... ಎಂದೂ ಮುನ್ನೆಚ್ಚರಿಕೆಯ ಮಾತು ಹೇ... ದರು.

ಇತ್ತೀಚೆಗೆ ಪ್ರಕಟವಾದ ಕೃಷ್ಣಪ್ಪನ... ಕವನಗಳ ಕಿರು ಸಂಕಲನ 'ಹೂದುಂಬಿ'... ಕೆಲವು ನೂರು ಪ್ರತಿಗಳನ್ನು ಮಾರ... ಮೂಲಕ ಸಣ್ಣ ಮೊತ್ತವೊಂದನ್ನು ... ಗ್ರಹಿಸಿ ಅದನ್ನು ಕೃಷ್ಣಪ್ಪನವರಿಗೆ ಅರ್ಪಿ... ಲಾಯಿತು.

ಡಾ|| ಪ್ರಸಾದ್ ಮತ್ತು ತಮ್ಮ ಗೆ... ಯರೊಂದಿಗೆ ಈ ಕಾರ್ಯಕ್ರಮವನ್ನು ... ಯೋಜಿಸಿದ್ದ ಉತ್ತಮೇಶ್ವರದ ವೈದ್ಯಾ... ಕಾರಿ ಡಾ|| ಕೋದಂಡರಾಮ ಸ್ವಾಗ... ಭಾಷಣ ಮಾಡುತ್ತ, ಸಮಾಜದ ಋ... ವನ್ನು ಯಥಾಶಕ್ತಿ ತೀರಿಸುತ್ತಿರುವ ಇಂ... ಕವಿ–ಕಲಾವಿದರ ಕಾರ್ಯವನ್ನು ಗುರುತಿ... ಪುರಸ್ಕರಿಸುವುದು ಆರೋಗ್ಯವಂತ ಸಮಾ... ಜದ ಒಂದು ಕರ್ತವ್ಯ ಎಂದರಲ್ಲದೆ, 'ಹೂ... ದುಂಬಿ' ಪುಸ್ತಕವನ್ನು ಎಲ್ಲರೂ ಕೊಂ... ಕೊಳ್ಳುವಂತೆ ಸೂಚಿಸಿದರು. ಸೇವಾ ಕೇಂ... ದ್ರದ ಕಾರ್ಯದರ್ಶಿ ಗಂಗಾಧರ್ ವಂ... ದರು.

ಬೆಂಗಳೂರಿನ ಪದ್ಮಾ ಗುರುರಾಜ್ ... ರಿಂದ ಸುಗಮ ಸಂಗೀತ ಮತ್ತು ನಾ... ಯ ಕೆ.ಎಸ್. ಕೃಷ್ಣಮೂರ್ತಿಯವರಿ... ಪ್ರತಿಭಾ ಪ್ರದರ್ಶನಗಳನ್ನೊಳಗೊಂ... ಮನರಂಜನಾ ಕಾರ್ಯಕ್ರಮದೊಂ... ಸಮಾರಂಭ ಮುಕ್ತಾಯವಾಯಿತು.

### ಪದ್ಯದಂಕಣ

## ಬಾಡಿಗೆ ತಲೆಯುವರು

ಬಾಡಿಗೆಯ ತಲೆಯವರು
ಬಹು ಮಂದಿ ನಾವು, ನಮ್ಮವರು,
ನಮ್ಮಜ್ಜ, ಮುತ್ತಜ್ಜಗಳು.
ಮಹೇಂದ್ರಜಾಲಿಗರ ಮಾತುಗಳ ಕೇಳಿ
ಮನದಿ ಹರುಷವ ತಾಳಿ
ಮನ ಸೋತು ಮರುಳಾಗುವವರು.

ಜರತಾರಿ ಜಗದ್ಗುರುವರರ
ಪಾದ ಪೂಜೆಯ ಮಾಡಿ, ಆ ಜಲವ
ಕುಡಿದು ತೃಪ್ತಿ ಪಡೆದು
ಪಾದಧೂಳನು ಮುಡಿದು
ಮುಕ್ತಿ ಪಡೆದು
ಧನ, ಕನಕ, ಗೋದಾನ, ಭೂದಾನ
ಎಲ್ಲವನು ನೀಡಿ ಕೊಂಡಾಡಿ

ಹಗಲಿರುಳು ಹೆಂಡವನು ಕುಡಿದು
ಹೆಬ್ಬೆರಳನೊತ್ತಿದರು
ಅಜ್ಜ ಮುತ್ತಜ್ಜಗಳು.
ಮಳ್ಳಕು ಮರಿಗಳಿಗೂ
ಭಿಕ್ಷೆ ಪಾತ್ರೆಯ ಕೊಡಿಸಿ
ತೃಪ್ತರಾದರು ನಮ್ಮ ಪೂರ್ವಜರು

ಮುತ್ತುಗಳ ರತ್ನಗಳ
ವಜ್ರ ವೈಡೂರ್ಯಗಳ ಕಿರೀಟವನ್ನಿಟ್ಟು
ಬಗೆ ಬಗೆಯ ಬಂಗಾರದೊಡವೆಗಳ
ತೊಟ್ಟು
ಪಟ್ಟೆ ಪೀತಾಂಬರ ಮಡಿಯುಟ್ಟು
ನಮ್ಮನೆಲ್ಲರ ಹೊರಗಿಟ್ಟು

ಆನೆ ಕುದುರೆಗಳುಂಟು
ಮಂದಿ ಮಾರ್ಬಲ ಉಂಟು
ಹೊಗಳು ಭಟ್ಟಂಗಿಗಳ ಗುಂಪು
ಬೇರುಂಟು
ಜಗದ ಗುರು ಎಂದೆಂಬ ಬಿರುದು
ಮತ್ತುಂಟು
ದಂಡವನು ನೀಡುವರು ಬಾಡಿಗೆಯ
ತಲೆಯವರು

ರಾಜಕೀಯ ನವನಂಟು ಸದಾ ಉಂಟು
ಮುಂದುಗಡೆ ಬಾಗಿಲಲಿ ಧರ್ಮ
ಪ್ರವಚನಗಳುಂಟು
ಹಿಂದುಗಡೆ ಬಾಗಿಲಲಿ ದೇವದಾಸಿಯರು
ಇನ್ನೂ ಬೇಕಿದ್ದರೆ, ಗುಪ್ತ ವೇಶ್ಯೆಯರು

—ಹೊ. ನ. ಕೃಷ್ಣಪ್ಪ

# "ಮಲೆನಾಡಲ್ಲಿ ಹೊಸದಾಗಿ ನೀಲಗಿರಿ ನೆಡುತ್ತಿಲ್ಲ"

—ಅರಣ್ಯಾಧಿಕಾರಿ ಸ್ಪಷ್ಟನೆ

ಕೊಪ್ಪ :ವಾರ್ಷಿಕ 40 ಅಂಗುಲಕ್ಕಿಂತ ಕಡಿಮೆ ಮಳೆ ಬೀಳುವ ಭೂಮಿ ಮಲೆನಾಡಿನಲ್ಲಿಲ್ಲವಾದ್ದರಿಂದ ಇಲ್ಲಿ ಈಗ ಹೊಸದಾಗಿ ಎಲ್ಲೂ ನೀಲಗಿರಿ ನೆಡುತ್ತಿಲ್ಲ ಎಂದು ಕೊಪ್ಪ ವಲಯ ಅರಣ್ಯಾಧಿಕಾರಿ ಗೋಪಾಲ್ ಸಿಂಗ್ ಸ್ಪಷ್ಟ ಪಡಿಸಿದ್ದಾರೆ.

ಅಂದಗಾರಿನ ಬಳಿ ಇಲಾಖೆಯವರು ನೀಲಗಿರಿ ನೆಡುತ್ತಿದ್ದಾರೆ ಎಂದು ಈಚೆಗೆ ಕೆಲ ರೈತರು ಗಾಬರಿಯಿಂದ ಪತ್ರಿಕೆಗೆ ತಿಳಿಸಿದಾಗ ಅರಣ್ಯಾಧಿಕಾರಿಯವರನ್ನು ಕೇಳಿದ್ದಕ್ಕೆ ಈ ರೀತಿ ತಿಳಿಸಿದರು.

ಇದೇ ರೀತಿ ಈಚೆಗೆ ಎಲ್ಲ ಕಡೆ ಬೆಳೆಸಲಾಗುತ್ತಿರುವ ಅಕೇಸಿಯಾ ಸಸ್ಯದ ಬಗ್ಗೆ ಕೂಡ ರೈತರಲ್ಲಿ ಇರುವ ಸಂದೇಹ ಅನವಶ್ಯಕ ಎಂದು ಅವರು ಹೇಳುತ್ತಾರೆ. ಅವರ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಕೊಟ್ಟಿದೆ.

ಅಕೇಸಿಯಾ ಕೂಡ ರೇಯಾನ್‌ಗೆ ಉಪಯೋಗಿಸಲ್ಪಡುತ್ತದೆಂಬ ನಂಬಿಕೆಯಿದೆ. ಅದು ತಪ್ಪು. ರೇಯಾನ್‌ಗೆ ನೀಲಗಿರಿ ಸಸ್ಯ ಮಾತ್ರ ಬೇಕು. ಬೇರಾವುದೂ ಆಗದು. ಅಕೇಸಿಯಾವು ಹೈಗದ ನಂತರ ಅತ್ಯುತ್ಕೃಷ್ಟವಾದ ಕಟ್ಟಿಗೆ. ಇದು ಹೆಚ್ಚೆಂದರೆ ಕಾಗದ ತಯಾರಿಕೆಗೆ ಬರಬಹುದೆಂಬ ಸೂಚನೆಯಿದ್ದು ಸಂಶೋಧನೆ ನಡೆಯುತ್ತಿದೆ ಅಷ್ಟೇ.

ರೈತರಿಗೆ ಕೊಡುವ ಸಸಿಗಳಲ್ಲಿ ಈ ಅಕೇಸಿಯ, ಸರ್ವೆ, ರೈನ್ ಟ್ರೀ ಇಂಥವನ್ನು ಕೂಡ ಸೇರಿಸುತ್ತಿಲ್ಲ. ಅನಿವಾರ್ಯವಾದಾಗ ಮಾತ್ರ ಕೊಡುತ್ತಿದ್ದೇವೆ. ರೈತರಿಗೆ ಬೇಕಾದ ಜಾತಿಯ ಸಸ್ಯಗಳನ್ನೇ ಯಥೇಚ್ಛವಾಗಿ ಬೆಳೆಸಿ ಹಂಚುತ್ತಿದ್ದೇವೆ.

ಇಲಾಖೆಯ ನೆಡುತೋಪುಗಳಲ್ಲಿ ಅಕೇಸಿಯಾವನ್ನು ವ್ಯಾಪಕವಾಗಿ ಬೆಳೆಸುತ್ತಿರುವುದಕ್ಕೆ ಬಹು ಮುಖ್ಯ ಕಾರಣವೆಂದರೆ ನಮ್ಮಲ್ಲಿ ಬೋಳಾಗಿರುವ, ಬಂಜರು ಬಿದ್ದಿರುವ ಭೂಮಿಯನ್ನು ತುರ್ತಾಗಿ ಯಾವುದಾದರೂ ರೀತಿಯ ಸಸ್ಯದಿಂದ ಆವೃತಗೊಳಿಸಲೇ ಬೇಕಾಗಿರುವುದು. ಸ್ಥಳೀಯ ಜಾತಿಯ ಸಸಿಗಳಾದರೆ ಅವನ್ನು 30 ಅಡಿಗೊಂದರಂತೆ ಬೆಳೆಸಬೇಕು, ಅವುಗಳ ಬೆಳವಣಿಗೆಯೂ ಅತ್ಯಂತ ನಿಧಾನ. ಅವು ಭೂ... ಯನ್ನು ಆವರಿಸಿಕೊಳ್ಳುವಷ್ಟು ಬೆಳೆ... ಬೇಕಾದರೆ ಹತ್ತಿಪ್ಪತ್ತು ವರ್ಷಗಳೇ ಬೇ... ಗುತ್ತವೆ. ಆ ಅವಧಿಯಲ್ಲಿ ಜಾನುವಾ... ಗಳಿಂದ ಅವುಗಳ ರಕ್ಷಣೆ ಕೂಡ ಸಾ... ವಲ್ಲದ ಕೆಲಸ.

ಆದರೆ 6 ಅಡಿಗೊಂದರಂತೆ, ಬೆಳೆಸಬ... ದಾದ ಅಕೇಸಿಯ ಕೇವಲ 2–3 ವ... ದೊಳಗೆ ಭೂಮಿಯನ್ನು ಚೆನ್ನಾಗಿ ಆವ... ಕೊಳ್ಳುತ್ತದೆ. ಈ ಗಿಡಗಳ ನಡುವೆ ಸ್ಥ... ಯ ಜಾತಿಯ ಸಸ್ಯಗಳನ್ನೂ ಬೆಳೆಸುವ... ರಿಂದ ಅವುಗಳಿಗೆ ಜಾನುವಾರುಗಳಿಂದ ರ... ಣೆಯೂ ನೆರಳೂ ಸಿಕ್ಕಿ ಅವು ಕೂಡ ಚೆನ್ನಾ... ಗಿ ಬೆಳೆಯುತ್ತವೆ. ಈಗ ಇಲಾಖೆ ಎಲ್ಲ ... ಗಳಲ್ಲೂ ಈ ರೀತಿಯ ಮಿಶ್ರ ತೋಪು... ನ್ನೇ ಬೆಳೆಸುತ್ತಿದೆ.

ಹೀಗೆ ಭೂಮಿಯನ್ನು ಸಸ್ಯಗಳಿಂದ ಆ... ರಿಸುವುದರಿಂದ ಮಣ್ಣಿನೊಳಗೆ ಸಾರಜ... ವನ್ನು ಉತ್ಪತ್ತಿ ಮಾಡುವ ಬ್ಯಾಕ್ಟೀರಿ...

(4ನೇ ಪುಟ...

# ತೋಟಕಾರ್ಮಿಕರ ವೈದ್ಯಕೀಯ ಯೋಜನೆ ಜಾರಿಗೊಳಿಸಲು ಆಗ್ರಹ

ಚಿಕ್ಕಮಗಳೂರು: ಕಾರ್ಮಿಕರಿಗೂ, ಸರ್ಕಾರ ಮತ್ತು ಮಾಲೀಕರಿಗೂ ಈಗಾಗಲೇ ಆಗಿರುವ ವೈದ್ಯಕೀಯ ಯೋಜನೆಗೆ ಸಂಬಂಧಪಟ್ಟ ಒಪ್ಪಂದವನ್ನು ಕೂಡಲೇ ಜಾರಿಗೊಳಿಸಬೇಕೆಂದು ಎ.ಐ.ಟಿ.ಯು.ಸಿ. ನೇತೃತ್ವದ ತೋಟ ಕಾರ್ಮಿಕರ ಸಂಘದ ಜಿಲ್ಲಾ ಸಮಿತಿ ಸಭೆ ಆಗ್ರಹಿಸಿದೆ.

ಈ ಒಪ್ಪಂದವನ್ನು "ಪುನರ್ ನಿರ್ಮಿಸಲು" ಸಮಿತಿಯೊಂದನ್ನು ರಚಿಸಿ, ಸಂಘಕ್ಕೆ ಪ್ರಶ್ನಾವಳಿಯೊಂದನ್ನು ಕಳಿಸಿ ಕೊಟ್ಟಿರುವುದನ್ನು ಚರ್ಚಿಸಿದ ಸಭೆಯು, ಇದು ತೋಟ ಕಾರ್ಮಿಕರಿಗೆ ಉಚಿತವಾಗಿ ನೀಡಬೇಕಾದ ವೈದ್ಯಕೀಯ ಸೌಲಭ್ಯದ ಜವಾಬ್ದಾರಿಯಿಂದ ಮಾಲೀಕರನ್ನು ಬಿಡುಗಡೆಗೊಳಿಸಿ, ಸರ್ಕಾರಿ ಆಸ್ಪತ್ರೆಯನ್ನು ಅವಲಂಬಿಸುವಂತೆ ಮಾಡುವ ಕುತಂತ್ರವೆಂದು ಪರಿಗಣಿಸಿತಲ್ಲದೆ, ಆ ಸಮಿತಿಯ ತೀರ್ಮಾನಗಳನ್ನು ತಿರಸ್ಕರಿಸಲು ನಿರ್ಧರಿಸಿತು.

ಈ ನಿಟ್ಟಿನಲ್ಲಿ, ಚುನಾಯಿತ ಶಾಸಕರು ಮತ್ತು ಮಂತ್ರಿಗಳು ಕಾರ್ಮಿಕರ ಹಿತಾಸಕ್ತಿ ಕಾಪಾಡಲು ಉದ್ದೇಶ ಪೂರ್ವಕವಾಗಿ 'ವಿಫಲ'ವಾಗುತ್ತಿರುವುದನ್ನು ಪ್ರತಿಭಟಿಸುವ ಸಲುವಾಗಿ, ತೋಟ ಕಾರ್ಮಿಕರು ವಾಸಿಸುವ ಪ್ರದೇಶಗಳಲ್ಲಿ ನಡೆಯುವ ಇಂಥವರ ಸಭೆಗಳನ್ನು ಮೇ ತಿಂಗಳ ಪೂರ್ತಿ ಬಹಿಷ್ಕರಿಸಲು ನಿರ್ಧರಿಸಿ, ಅದಕ್ಕಾಗಿ ವಿಭಾಗೀಯ ತಂಡಗಳನ್ನು ರಚಿಸಲಾಯಿತು.

ದೇಶದಾದ್ಯಂತ ಕಾನೂನುಬಾಹಿರವಾಗಿ ಕಾರ್ಖಾನೆಗಳ ಮುಚ್ಚುವಿಕೆಯಿಂದಾಗಿ ಲಕ್ಷಾಂತರ ಕಾರ್ಮಿಕರು ಬೀದಿ ಪಾಲಾಗುತ್ತಿರುವುದನ್ನು ತಡೆಗಟ್ಟಲು ಸರ್ಕಾರವು ವಿಫಲವಾಗಿರುವುದನ್ನು ಖಂಡಿಸಲು ಈ ಸಲದ ಮೇ ದಿನಾಚರಣೆಯನ್ನು ಕಾರ್ಖಾನೆಗಳ ಮುಚ್ಚುವಿಕೆ ವಿರೋಧಿ ದಿನವಾಗಿಯೂ ಆಚರಿಸಲು ನಿರ್ಧರಿಸಲಾಯಿತು.

## 'ಡಿ' ಗ್ರೂಪ್ ನೌಕರರ ಸಭೆ

ಕೊಪ್ಪ: ರಾಜ್ಯ ಸರ್ಕಾರಿ 'ಡಿ' ಗ್ರೂಪ್ ನೌಕರರ ತಾ॥ ಸಂಘದ ಸಭೆ ಏ. 22ರಂದು ಇಲ್ಲಿ ಸಂಘದ ಜಿಲ್ಲಾ ಅಧ್ಯಕ್ಷ ಗೋವಿಂದಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಫೆ. 25 ರಂದು ಆಯ್ಕೆಯಾದ ಕಾರ್ಯಕಾರಿ ಸಮಿತಿಯನ್ನು ಸಭೆ ಅನುಮೋದಿಸಿತಲ್ಲದೆ, ಸಂಘದ ಕಟ್ಟಡಕ್ಕೆ ಹಣ ಸಂಗ್ರಹಿಸುವುದಕ್ಕಾಗಿ ಜನಪ್ರಿಯ ಸಿನಿಮಾ ನಟ-ನಟಿಯರನ್ನು ಕರೆಸಿ ಕಾರ್ಯಕ್ರಮ ಏರ್ಪಡಿಸಬೇಕೆಂದು ತೀರ್ಮಾನಿಸಿತು.

## ಸಾಮೂಹಿಕ ವಿವಾಹ

ಕೊಪ್ಪ: ಇಲ್ಲಿನ ಬಾಳಗಡಿಯ ವಿದ್ಯಾ ಮಹಿಳಾ ಸಮಾಜ, ಚೇತನ ಯುವತಿ ಮಂಡಳಿ, ಹಿರೇಗದ್ದೆ ಯುವಕ ಸಂಘ ಹಾಗೂ ಯುವಜನ ಸೇವಾ ಇಲಾಖೆಗಳ ಆಶ್ರಯದಲ್ಲಿ 7 ಜೊತೆ ಸಾಮೂಹಿಕ ವಿವಾಹ ಚಟ್ಟಿಮಕ್ಕಿ ದೇವಸ್ಥಾನದಲ್ಲಿ ಈಚೆಗೆ ನೆರವೇರಿತು

## ಸೂಟ್‌ಕೇಸ್ ಕಳೆದಿದೆ

ಚರ್ಮದ, ಕಂದು ಬಣ್ಣದ, ಮಧ್ಯಮ ಗಾತ್ರದ ಸೂಟ್‌ಕೇಸ್ ಒಂದು 23.4.87 ರ ಬೆಳಗಿನಜಾವ ಬರುವ ಕೋಲಾರ-ಶೃಂಗೇರಿ ಬಸ್ಸಿನಲ್ಲಿ ಕಳೆದುಹೋಗಿದೆ. ಯಾರಿಗಾದರೂ ಸಿಕ್ಕಿದ್ದಲ್ಲಿ "ಮುಂಜಾವು" ಕಾರ್ಯಾಲಯಕ್ಕಾಗಲಿ, ಕೊಪ್ಪ ಪೋಲೀಸ್ ಸ್ಟೇಶನ್ನಿಗಾಗಲೀ ತಿಳಿಸುವುದು ಅಥವಾ ತಂದು ಒಪ್ಪಿಸುವುದು. ಸೂಕ್ತ ಬಹುಮಾನ ಉಂಟು.

**ರಂಗಭಟ್,** ಬೆಂಗಳೂರು.



## "ಮಲೆನಾಡಿನಲ್ಲಿ ಹೊಸದಾಗಿ ನೀಲಗಿರಿ ನೆಡುತ್ತಿಲ್ಲ"

(3ನೇ ಪುಟದಿಂದ)

ಗಳಿಗೆ ರಕ್ಷಣೆ ದೊರೆತು ಅವುಗಳ ಚಟುವಟಿಕೆ ಹೆಚ್ಚುತ್ತದೆ. ಇದರಿಂದ ಹೆಚ್ಚಿಚ್ಚ್ಟ ಸಸ್ಯ ಸಂವೃದ್ಧಿಯಾಗುತ್ತದೆ. ಇಲ್ಲದಿದ್ದರೆ ಬ್ಯಾಕ್ಟೀರಿಯಗಳು ನಶಿಸುತ್ತ ಭೂಮಿ ಹೆಚ್ಚೆಚ್ಚು ಬಂಜರಾಗುತ್ತ ಹೋಗುತ್ತದೆ. ಅಲ್ಲದೆ, ವ್ಯಾಪಕ ಭೂ ಸವಕಳಿಯನ್ನು ತಡೆಯುವುದಕ್ಕೂ ಸಸ್ಯಾವರಣ ಅತ್ಯಗತ್ಯ. ಇದರಿಂದ ಮಳೆಯೂ ಹೆಚ್ಚಿ ಒಟ್ಟಾರೆ ನಿಸರ್ಗದ ಚಕ್ರ ಕ್ರಮಬದ್ಧವಾಗಿ ಚಲಿಸುವಂತಾಗುತ್ತದೆ.

ಹೀಗೆ ಒಮ್ಮೆ 10-12 ವರ್ಷ ಬೆಳೆದ ಅಕೇಸಿಯವನ್ನು ಕಡಿದಾಗ ಅಷ್ಟು ಹೊತ್ತಿಗೆ ನಡುವಿನ ಸ್ಥಳೀಯ ಜಾತಿಯ ಸಸ್ಯಗಳೂ ಸಹ ತಕ್ಕ ಮಟ್ಟಿಗೆ ಬೆಳೆದಿದ್ದು, ಜಾನುವಾರುಗಳ ಬಾಯಿಗೆ ಸಿಕ್ಕದಷ್ಟಾಗಿರುತ್ತವೆ. ಅನಂತರ ಬೇಕಾದರೆ ಅವುಗಳನ್ನು ಹಾಗೆಯೇ ಬಿಟ್ಟರೆ ಸಾಕು. ಅವು ಭೂಮಿಯನ್ನು ಆವರಿಸಿಕೊಳ್ಳುತ್ತವೆ.

ಸ್ಥಳೀಯ ಜಾತಿಯ ಕಾಡುಗಳನ್ನು ಬೆಳೆಸಲು ಇದು ಅತ್ಯಂತ ಉಪಯುಕ್ತವೂ ಸುಲಭಸಾಧ್ಯವೂ ಆದ ವಿಧಾನ. ಅಲ್ಲದೆ ಇದರಿಂದ ಉತ್ತಮ ದರ್ಜೆಯ ಕಟ್ಟಿಗೆ ಹಾಗೂ ಸೊಪ್ಪು ಕೂಡ ಯಥೇಚ್ಛವಾಗಿ ದೊರೆಯುತ್ತದೆ. ಅಕೇಸಿಯದಿಂದ ಪರಿಸರಕ್ಕೆ ಕೂಡ ಯಾವುದೇ ಹಾನಿ ತಟ್ಟುವುದಿಲ್ಲ.









ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಟಿಗೆ ಅಚ್ಚು ಕೂಟ, ಕೊಪ್ಪ.